

# ಜಗದೊಡೆಯನ ಜನ್ಮಾಷ್ಟಮೀ

## ಒಂದು ವಿಮರ್ಶೆ


ಸಂಪಾದಕ:

ಡಾ ॥ ಕೆ.ಆರ್. ಗುರುಮೂರ್ತಿ ಆಚಾರ್ಯ

ಬೆಂಗಳೂರು



ಶುಚಿಷತ್ ಪ್ರಕಾಶನ

ಬೆಂಗಳೂರು

# ಪೀಠಿಕೆ

ಶ್ರೀಕೃಷ್ಣಜನ್ಮಾಷ್ಟಮೀವ್ರತವನ್ನು ಸಾಧಕರೆಲ್ಲರೂ ಅವಶ್ಯ ಆಚರಿಸಬೇಕು. ಶ್ರೀಭಗವತ್ಪಾದರು ಜಯಂತೀಕಲ್ಪದಲ್ಲಿ ಆದೇಶಿಸಿದಂತೆ ಅಂದು ಎಲ್ಲರೂ ಅವಶ್ಯವಾಗಿ ಉಪವಾಸವನ್ನು ಆಚರಿಸಬೇಕು. ಪುರಾಣಗಳೂ ಈ ವ್ರತಾಚರಣೆಯ ಮಹಿಮೆಯನ್ನು ಕೊಂಡಾಡಿವೆ. ಈ ವ್ರತವನ್ನು ಆಚರಿಸಿದವನು ಯಮಪುರಕ್ಕೆ ಹೋಗಲಾರ, ಹೊರತಾಗಿ ವಿಷ್ಣುಲೋಕಕ್ಕೆ ಹೋಗುತ್ತಾನೆ. ಬದುಕಿರುವಾಗ ಎಲ್ಲ ಕಾರ್ಯಗಳು ಸಿದ್ಧಿಸುತ್ತವೆ, ಕೊನೆಗಾಲದಲ್ಲಿ ಹರಿಸ್ಮರಣೆ ಬರುತ್ತದೆ.

**ಜನ್ಮಾಷ್ಟಮೀವ್ರತಂ ಯೇ ವೈ ಪ್ರಕುರ್ವಂತಿ ನರೋತ್ತಮಾಃ ।**
**ಕಾರಯಂತ್ಯಥವಾ ಲೋಕಾ ಲಕ್ಷ್ಮೀಸ್ತೇಷಾಂ ಸದಾ ಸ್ಥಿರಾ ॥**

**ನ ವೇದೈರ್ನ ಪುರಾಣೈಶ್ಚ ಮಯಾ ದೃಷ್ಟಂ ಮಹಾಮುನೇ ।**
**ಯತ್ಸಮಂ ಚಾಧಿಕಂ ವಾಪಿ ಕೃಷ್ಣಜನ್ಮಾಷ್ಟಮೀವ್ರತಾತ್ ॥** (ಸ್ಕಾಂದೇ)

ಯಾವ ಉತ್ತಮಮನುಷ್ಯರು ಜನ್ಮಾಷ್ಟಮೀವ್ರತವನ್ನಾಚರಿಸುತ್ತಾರೋ, ಅಥವಾ ಬೇರೆಯವ-ರಿಂದ ಮಾಡಿಸುತ್ತಾರೋ ಅಂತಹವರಲ್ಲಿ ಲಕ್ಷ್ಮೀಯು ಸದಾ ಸ್ಥಿರವಾಗಿ ನಿಲ್ಲುವಳು. ಮಹಾಮುನಿಯೇ! ವೇದಪುರಾಣಗಳಲ್ಲೆಲ್ಲಿಯೂ ಕೃಷ್ಣಜನ್ಮಾಷ್ಟಮೀವ್ರತಕ್ಕೆ ಸಮವಾದ ಅಥವಾ ಅಧಿಕವಾದ ವ್ರತವನ್ನು ನಾನು ಕಂಡಿಲ್ಲ ಇತ್ಯಾದಿಯಾಗಿ ಪುರಾಣಗಳು ಹಾಡಿ ಹೊಗಳಿವೆ.

ಈ ವ್ರತಾಚರಣೆಯ ಕ್ರಮವನ್ನು ಆಚಾರ್ಯರು ಸ್ಪಷ್ಟವಾಗಿ ತಿಳಿಸಿಕೊಟ್ಟಿದ್ದಾರೆ. ಈ ಎಲ್ಲ ಕಾರಣಗಳಿಂದ ನಾವು ಮಾಡುವುದೂ ನಮ್ಮವರಿಂದ ಮಾಡಿಸುವುದೂ ನಮಗೆಲ್ಲ ಅವಶ್ಯ ಕರ್ತವ್ಯವಾಗಿದೆ. ಜಯಂತೀಕಲ್ಪದಲ್ಲಿ ಆಚಾರ್ಯರು ಉಲ್ಲೇಖಿಸಿದ ಪುರಾಣಶ್ಲೋಕ ಹೀಗಿದೆ–

**ರೋಹಿಣ್ಯಾಮರ್ಧರಾತ್ರೇ ತು ಯದಾ ಕಾಲಾಷ್ಟಮೀ ಭವೇತ್ ।**
**ಜಯಂತೀ ನಾಮ ಸಾ ಜ್ಞೇಯಾ ಸರ್ವಪಾಪಪ್ರಣಾಶನಮ್ ।**
**ಯಸ್ಯಾಂ ಜಾತೋ ಹರಿಃ ಸಾಕ್ಷಾನ್ನಿಶೀಥೇ ಭಗವಾನಜಃ ॥**

ಯಾವ ಕೃಷ್ಣಪಕ್ಷದ ಅಷ್ಟಮಿಯ ಮಧ್ಯರಾತ್ರಿಯಲ್ಲಿ ರೋಹಿಣಿ ಇರುವುದೋ ಅಂದು **ಜಯಂತೀ** ಎಂದು ತಿಳಿಯಬೇಕು, ಅದು ಎಲ್ಲ ಪಾಪಗಳನ್ನು ಪರಿಹರಿಸುವುದು, ಏಕೆಂದರೆ ಆ ತಿಥಿಯಂದು ರಾತ್ರಿಯಲ್ಲಿ ಜನನವಿಲ್ಲದ ಜಗದೊಡೆಯ ಅವತರಿಸಿದ.

ಈ ಶ್ಲೋಕದಲ್ಲಿ ಹೇಳಿರುವಂತೆ ಅಷ್ಟಮೀತಿಥಿ–ಮಧ್ಯರಾತ್ರಿ–ರೋಹಿಣಿ ಇದೆಲ್ಲವೂ ಕೃಷ್ಣ ಹುಟ್ಟಿದಾಗ ಇತ್ತು, ಆದರೆ ಈಗ ಪ್ರತಿವರ್ಷವೂ ಇವೆಲ್ಲವೂ ದೊರೆಯುವುದಿಲ್ಲವಾದರೂ ಯಾವುದು ಮುಖ್ಯವೋ ಅದಿರುವ ದಿನದಂದುನಾವು ವ್ರತವನ್ನು ಆಚರಿಸಬೇಕು ಎಂಬುದು ತೀರ್ಮಾನ. ಆದರೆ ಮುಖ್ಯವಾದದ್ದು ಯಾವುದು ? ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಇಂದಿನ ಆಚರಣೆಯಲ್ಲಿ ಮಧ್ಯರಾತ್ರಿಗೆ ಅಷ್ಟಮಿ ಇರುವುದು

ಮುಖ್ಯವೆಂದು ನಡೆದುಕೊಂಡು ಬರುತ್ತಿದ್ದೇವೆ. ಬಹುಶಃ ಇದಕ್ಕೆ ಕಾರಣ ಆಚಾರ್ಯರ ವಾಕ್ಯದಲ್ಲಿರುವ **'ಅರ್ಧರಾತ್ರೇ'** ಎಂಬ ಪದ. ಆದರೆ ಇದರೊಂದಿಗೆ **'ಅಷ್ಟಮೀ'** ಎಂಬ ಪದವೂ ಆಚಾರ್ಯರ ವಾಕ್ಯದಲ್ಲಿದೆ. **ಅಷ್ಟಮೀತಿಥಿ ಇರಬೇಕೆಂಬುದು ಅದರ ಅರ್ಥ**, ಸೂರ್ಯೋದಯಕ್ಕೆ ಇರುವ ತಿಥಿ ಅಂದಿನ ಧರ್ಮಾನುಷ್ಠಾನಕ್ಕೆ ವಿಹಿತವಾದ ತಿಥಿ ಎಂಬುದು ಸಾಮಾನ್ಯನಿಯಮ, ಸೂರ್ಯೋದಯಕ್ಕೆ ಇಲ್ಲದ ಮಧ್ಯರಾತ್ರಿಗಷ್ಟೇ ಇರುವ ತಿಥಿ ಅಷ್ಟಮೀ ಅನಿಸುವುದೇ? ಎಂಬ ಸಂಶಯ ಮೂಡಿತು, ಅದರ ಪರಿಹಾರಕ್ಕಾಗಿ ಹತ್ತಾರು ಧರ್ಮ ಗ್ರಂಥಗಳನ್ನು ತಿರುವಿ ಹಾಕಿದಾಗ ಇದಕ್ಕೆ ಪರವಾದ ಹಾಗೂ ವಿರುದ್ಧವಾದ ವಾಕ್ಯಗಳು ಕಂಡುಬಂದವು, ಆಶ್ಚರ್ಯವೆನಿಸುವ ಸಂಗತಿಗಳು ಕಂಡವು. ಅದನ್ನು ಎಲ್ಲರಿಗೂ ತಿಳಿಸಬೇಕೆಂದು ನಿಶ್ಚಯಿಸಿದೆ. ರುಚಿಯಾದದ್ದನ್ನು ಒಬ್ಬನೇ ಅನುಭವಿಸಬಾರದು, ಆದ್ದರಿಂದ ಸಮಾಜಕ್ಕೆ ಹಂಚಬೇಕೆಂದು ಪ್ರಶ್ನೋತ್ತರ ರೂಪವಾಗಿ ಈ ಹೊತ್ತಿಗೆಯ ಮೊದಲ ಭಾಗವನ್ನು ಹೊರತರುತ್ತಿದ್ದೇನೆ. ಇನ್ನೂ ಹೆಚ್ಚಿನ ಪ್ರಾಮಾಣಿಕ ವಿಮರ್ಶೆಗೆ ಆಚರಣೆಗೆ ಇದು ನಾಂದಿಯಾಗಲಿ.

ಇಂತಹ ಕೃಷ್ಣಾಷ್ಟಮಿಯ ವಿಷಯದಲ್ಲಿ ನಾನಾ ಸಂದೇಹಗಳಿವೆ–

★ ಶ್ರಾವಣದಲ್ಲಿಯೋ ? ಭಾದ್ರಪದದಲ್ಲಿಯೋ ಅಥವಾ ಸಿಂಹಮಾಸದಲ್ಲಿ ವ್ರತವನ್ನು ಆಚರಿಸಬೇಕೋ ?
★ ಕೃಷ್ಣಾಷ್ಟಮೀ–ಕೃಷ್ಣಜಯಂತೀ ವ್ರತ ಎರಡು ಬೇರೆಯೋ? ಒಂದೋ?
★ ರೋಹಿಣೀಯೋಗ ಮುಖ್ಯವೋ? ಅಷ್ಟಮೀತಿಥಿ ಮುಖ್ಯವೋ?
★ ಅಷ್ಟಮೀತಿಥಿ ಸೂರ್ಯೋದಯಕ್ಕೆ ಇರಬೇಕೋ? ಮಧ್ಯರಾತ್ರಿಗೋ?
★ ಪಾರಣೆಯನ್ನು ಅರ್ಘ್ಯದ ನಂತರ ಮಾಡಬೇಕೋ ? ದ್ವಾದಶಿಯಂತೆ ಬೆಳಿಗ್ಗೆ ಉತ್ಸವದ ನಂತರ ಮಾಡಬೇಕೋ? ತಿಥಿ ಮುಗಿದ ನಂತರವೇ? ನಕ್ಷತ್ರ ಮುಗಿದ ನಂತರವೇ ?

ಹೀಗೆ ಅನೇಕ ಪ್ರಶ್ನೆಗಳು ಸಾಧಕರ ಮನಸ್ಸಿನಲ್ಲಿ ಸುಳಿಯುತ್ತವೆ, ಅವುಗಳನ್ನು ಯಾವುದೇ ಪೂರ್ವಾಗ್ರಹವಿಲ್ಲದೆ ವಿಮರ್ಶಿಸಿ ಸರಿಯಾದ ಆಚರಣೆಗಳನ್ನು ನಾವು ಮಾಡುವಂತಾಗಬೇಕೆಂಬ ಸದುದ್ದೇಶವನ್ನು ಹೊತ್ತು ಕಿರುಹೊತ್ತಿಗೆ ಹೊರಟಿದೆ, ನಿಷ್ಕಲ್ಮಷಹೃದಯದಿಂದ ವಿಮರ್ಶಿಸಿ ಸ್ವೀಕರಿಸುವುದು ಸಜ್ಜನರ ಸ್ವಭಾವವಲ್ಲವೇ.

ಸಜ್ಜನರ ಮನಸ್ಸಿನಲ್ಲಿ ಮೂಡಬಹುದಾದ ಪ್ರಶ್ನೆಗಳಲ್ಲಿ ಪ್ರಕೃತ ಅಷ್ಟಮಿಯು ಸೂರ್ಯೋದಯಕ್ಕೆ ಇರಬೇಕೋ? ಮಧ್ಯರಾತ್ರಿ ಅರ್ಘ್ಯಕಾಲಕ್ಕೆ ಇದ್ದರೆ ಸಾಕೋ? ಎಂಬ ಪ್ರಶ್ನೆಯನ್ನು ಪ್ರಧಾನವಾಗಿ ಇಲ್ಲಿ ವಿಮರ್ಶಿಸಲಾಗಿದೆ.

ಯಾವ ಸರ್ವಜ್ಞಾಚಾರ್ಯರ ಮಾತುಗಳೇ ನಮಗೆ ಪ್ರಮಾಣ ಎನಿಸಿದ್ದರೂ ಸ್ವತಃ ಶ್ರೀಮದಾಚಾರ್ಯರೇ ತಮ್ಮ ಅಭಿಪ್ರಾಯಗಳಿಗೆ ಪ್ರಮಾಣಗಳನ್ನು ಕೊಡುವ ಮೂಲಕ ಪ್ರಮಾಣ ಪುರಸ್ಸರವಾಗಿದಿಯೇ ? ಎಂಬುದನ್ನು ವಿಮರ್ಶಿಸಬೇಕು, ಪ್ರಮಾಣದ ಪರವಾಗಿ ನಿಲ್ಲಬೇಕು, ಅದನ್ನು ಮಾತ್ರ ಅನುಸರಿಸಬೇಕು ಎಂಬ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿದ್ದಾರೆ. ಆದ್ದರಿಂದ ಈ ಗ್ರಂಥದಲ್ಲಿ ಯಾವುದೇ ಪ್ರಾಚೀನರ ವಾಕ್ಯಗಳನ್ನು ವಿಮರ್ಶೆಮಾಡಿದ ಮಾತ್ರಕ್ಕೆ

ಅವರ ಮೇಲೆ ಅಗೌರವವಿದೆ ಎಂದರ್ಥವಲ್ಲ, ಹೊರತಾಗಿ ಅವರ ಪದಗಳಿಗೆ ಶಿರಸಾ ನಮಿಸಿ ಸತ್ಯದ ಅರಿವಿಗಾಗಿ ಮಾತ್ರ ವಿಮರ್ಶಿಸಲಾಗಿದೆ. ಮೊಸರು ಕಡೆದಾಗಲ್ಲವೇ ಬೆಣ್ಣೆ ಲಭಿಸುವುದು! ವಿಮರ್ಶಿಸಿದಾಗಲ್ಲವೇ ತತ್ವ ತಿಳಿಯುವುದು.

ಪ್ರಾಂಜಲನಾಗಿ ಅರಿಕೆ ಮಾಡಿಕೊಳ್ಳುವುದಿದೆ – ಈ ಪುಸ್ತಕವನ್ನು ಯಾವುದೇ ಮತೀಯ–ಮಠೀಯ ಅಭಿಮಾನದಿಂದಾಗಲಿ ವಿರೋಧ– ದಿಂದಾಗಲಿ ಬರೆದಿಲ್ಲ. ಅಭಿಮಾನವಿದ್ದರೆ ಅದು ಸನ್ಮಾರ್ಗದಲ್ಲಿ, ಆಗ್ರಹವಿದ್ದರೆ ಅದು ಭಗವತ್ಪ್ರೀತಿಯಲ್ಲಿ ಮಾತ್ರ.

ಈ ಪುಸ್ತಕವನ್ನು ಓದುವ ಮುನ್ನ ಕೆಲವು ಸಾಮಾನ್ಯವಿಷಯಗಳು ತಿಳಿದಿರಲಿ–

**– ತಿಥಿ –**

★ ಪಾಶ್ಚಾತ್ತ್ಯರಂತೆ ರಾತ್ರಿ 12:00 ಘಂಟೆಯಿಂದ ದಿನದ ಪ್ರಾರಂಭವನ್ನು ಭಾರತೀಯರು ಅನುಸರಿಸುವುದಿಲ್ಲ, ಹೊರತಾಗಿ ಸೂರ್ಯೋದಯಕ್ಕೆ ದಿನದ ಆರಂಭ. ಇಂದಿನ ತಿಥಿ ಯಾವುದು? ಎಂದು ನಿಶ್ಚಯಿಸುವುದು ಸೂರ್ಯೋದಯಕ್ಕೆ ತಿಥಿ ಇರುವ ಆಧಾರದಲ್ಲಿ, ಇಂದಿನ ಸೂರ್ಯೋದಯಕ್ಕೆ ಯಾವ ತಿಥಿ ಇದೆಯೋ ಅದೇ ಇಂದಿನ ತಿಥಿ ಎಂದು ಸಾಮಾನ್ಯ ನಿಯಮ. ಸೂರ್ಯೋದಯದ **20** ನಿಮಿಷದ ನಂತರವೋ, ಎರಡು ಘಂಟೆಯ ನಂತರವೋ ಬೇರೆ ತಿಥಿ ಪ್ರಾರಂಭವಾದರೂ ಸ್ನಾನ–ಸಂಧ್ಯಾ–ವಂದನಾದಿಗಳಲ್ಲಿ ಸೂರ್ಯೋದಯಕ್ಕಿರುವ ತಿಥಿಯನ್ನೇ ಉಲ್ಲೇಖಿಸುವುದು ಕ್ರಮ.

★ ವಿದ್ಧತಿಥಿ ಎಂದರೆ ಹಿಂದಿನ ತಿಥಿಯ ಸ್ಪರ್ಶವು ಸೂರ್ಯೋದಯಕ್ಕೆ ಇದೆ ಎಂದರ್ಥ, ಸೂರ್ಯೋದಯದ ನಂತರ ಹಿಂದಿನ ದಿನದ ತಿಥಿಯು 20 ನಿಮಿಷವಿರಲಿ 2 ಘಂಟೆ ಇರಲಿ ಅಂತಹ ಸಂದರ್ಭದಲ್ಲಿ ಇಂದಿನ ತಿಥಿಯನ್ನು ಪೂರ್ವವಿದ್ಧ ತಿಥಿ ಅಥವಾ ವಿದ್ಧತಿಥಿ ಎಂದು ಕರೆಯುತ್ತಾರೆ.

★ ಶ್ರಾದ್ಧಾದಿಕರ್ಮಗಳಲ್ಲಿ ಕರ್ಮಕಾಲಕ್ಕಿರುವ ತಿಥಿಯನ್ನೇ ಆಚರಿಸುತ್ತೇವೆ ಸೂರ್ಯೋದಯಕ್ಕಿರುವ ತಿಥಿಯನ್ನಲ್ಲ.

★ ಅಂಗ–ಅಂಗಿ ಇವುಗಳಲ್ಲಿ ಅಂಗಿ ಎಂದರೆ ಮುಖ್ಯವಾದದ್ದು ಎಂದು ಸಾಮಾನ್ಯವಾಗಿ ಅರ್ಥೈಸಬಹುದಾಗಿದೆ. ಅಂಗವೆಂದರೆ ಅದರ ಸಲಕರಣೆ. ಉದಾ– ಯಾಗವು ಅಂಗಿ, ಅದಕ್ಕೆ ಬಳಸುವ ದ್ರವ್ಯಗಳು ಅಂಗ.

**ಕೃತಜ್ಞತೆಗಳು**

**ಈ ಪುಸ್ತಕಕ್ಕೆ ನಾನಾ ರೀತಿಯಲ್ಲಿ ಸಹಾಯ ಮಾಡಿದ, ಸಲಹೆ–**
**ಸೂಚನೆಗಳನ್ನು ನೀಡಿದ ಎಲ್ಲರಿಗೂ ಧನ್ಯವಾದಗಳು.**
**ಅಕ್ಷರಜೋಡಣೆ ಮತ್ತು ಪುಟವಿನ್ಯಾಸಗಳನ್ನು ಮಾಡಿ ಕೊಟ್ಟ**
**ವಿ। ಶ್ರೀಸುಶೀಲೇಂದ್ರಾಚಾರ್ಯ ಗೊಗ್ಗಿ ಯವರಿಗೆ ಧನ್ಯವಾದಗಳು.**
**ಸುಂದರವಾಗಿ ಮುದ್ರಿಸಿಕೊಟ್ಟ ವಾಗರ್ಥ ಮುದ್ರಣಾಲಯದವರಿಗೆ ಧನ್ಯವಾದಗಳು.**
**ಸ್ವಚ್ಛಮನದಿಂದ ಓದುವ ಎಲ್ಲ ಓದುಗರಿಗೆ ಧನ್ಯವಾದಗಳು.**

**ಇತಿ**

**ಡಾ।। ಕೆ.ಆರ್. ಗುರುಮೂರ್ತಿ ಆಚಾರ್ಯ**

# ಒಳಗೆ ಏನಿದೆ.......



★★★★

**॥ ಶ್ರೀಗುರುಭ್ಯೋ ನಮಃ ॥**

ಶ್ರೀಕೃಷ್ಣಾಷ್ಟಮಿಯ ವಿಷಯದಲ್ಲಿ ನಾನಾ ಸಂಶಯಗಳು ಸಾಧಕರ ಮನಸ್ಸಿನಲ್ಲಿ ಸುಳಿಯುವ ಸಾಧ್ಯತೆ ಇರುವುದರಿಂದ ಅವುಗಳನ್ನು ವಿಮರ್ಶಿಸಿ ಪ್ರಾಮಾಣಿಕವಾದ ಪರಿಹಾರ ಕಂಡುಕೊಳ್ಳುವ ನಿಟ್ಟಿನಿಂದ ನಮ್ಮ ಚರ್ಚೆ ನಡೆಯುತ್ತಿದೆ. ಆ ಸಂಶಯಗಳಲ್ಲಿ ಮೊದಲಿಗೆ ಕೃಷ್ಣಾಷ್ಟಮೀವ್ರತಾಚರಣೆ ಯಾವ ದಿನದಂದು? ಎಂದು ವಿಚಾರ ಮಾಡೋಣ.

## ನಡುರಾತ್ರಿಗೆ ಅಷ್ಟಮೀ

**ಪ್ರಶ್ನೆ:**–ಕೃಷ್ಣಾಷ್ಟಮೀವ್ರತದಲ್ಲಿ ಅರ್ಘ್ಯ ಕೊಡುವ ಮಧ್ಯರಾತ್ರಿಯ ಕಾಲವೇ ಮುಖ್ಯಕಾಲ. ಏಕೆಂದರೆ ಕೃಷ್ಣ ಹುಟ್ಟಿದ್ದು ಆ ಕಾಲದಲ್ಲಿ, ಆಗಲೇ ಅರ್ಘ್ಯ ಕೊಡುವುದರಿಂದಲೂ, ವಸಿಷ್ಠರ ವಾಕ್ಯವು ಹಾಗೇ ಹೇಳುತ್ತದೆ.

**ಅಷ್ಟಮೀ ರೋಹಿಣೀಯುಕ್ತಾ ನಿಶ್ಯರ್ಧೇ ದೃಶ್ಯತೇ ಯದಾ (ದಿ)।**
**ಮುಖ್ಯಕಾಲಃ ಸ ವಿಜ್ಞೇಯಸ್ತತ್ರ ಜಾತೋ ಹರಿಃ ಸ್ವಯಮ್ ॥**

(ವಸಿಷ್ಠಸಂಹಿತಾ)

ರೋಹಿಣೀಯುಕ್ತವಾದ ಅಷ್ಟಮಿಯು ಯಾವ ಮಧ್ಯರಾತ್ರಿಯಲ್ಲಿ ಕಾಣುತ್ತದೆಯೋ ಅದೇ ಮುಖ್ಯಕಾಲವೆಂದು ತಿಳಿಯಬೇಕು. ಸ್ವತಃ ಶ್ರೀಹರಿಯು ಆವಾಗ ಅವತರಿಸಿದನು.

ಈ ವಾಕ್ಯವು ಮಧ್ಯರಾತ್ರಿಯನ್ನೇ ಮುಖ್ಯಕಾಲವೆಂದು ಸ್ಪಷ್ಟವಾಗಿ ಹೇಳಿದೆಯಾದ್ದರಿಂದ ಆ ಕಾಲಕ್ಕೆ ಅಷ್ಟಮಿಯು ಯಾವತ್ತು ತೋರುತ್ತದೋ ಅಂದು ಕೃಷ್ಣಾಷ್ಟಮಿಯನ್ನು ಆಚರಿಸಬೇಕು. ಹಾಗೆಯೇ ಯೋಗೀಶ್ವರನು–

**ಅರ್ಧರಾತ್ರಾದಧಶ್ಚೋರ್ಧ್ವಮೇಕಾರ್ಧಘಟಿಕಾನ್ವಿತಾ ।**
**ರೋಹಿಣೀ ಚಾಷ್ಟಮೀ ಗ್ರಾಹ್ಯಾ ಉಪವಾಸವ್ರತಾದಿಷು ॥**

ಮಧ್ಯರಾತ್ರಿಗಿಂತ ಒಂದು ಘಳಿಗೆ ಅಥವಾ ಅರ್ಧಘಳಿಗೆ ಹಿಂದೆಯಾಗಲಿ ಮುಂದೆ ಆಗಲೀ ರೋಹಿಣೀ–ಅಷ್ಟಮೀ ಜೊತೆಗಿದ್ದರೆ ಅಂದೆ ಉಪವಾಸ ವ್ರತಾದಿಗಳನ್ನು ಮಾಡಬೇಕು.

ಜಾಬಾಲಿ–ವೃದ್ಧಗೌತಮರು –

**ಅಹಸ್ತು ತಿಥಯಃ ಪುಣ್ಯಾಃ ಕರ್ಮಾನುಷ್ಠಾನತೋ ದಿವಾ ।**
**ನಕ್ತಾದಿವ್ರತಯೋಗೇಷು ರಾತ್ರಿಯೋಗಃ ಪ್ರಶಸ್ಯತೇ ॥**

**ಕೃಷ್ಣಾಷ್ಟಮೀ ಶ್ರಾವಣೇ ತು ಪ್ರದೋಷಸಹಿತಾಷ್ಟಮೀ ।**
**ಜನ್ಮಾಷ್ಟಮೀ ಭವೇತ್ ಸೈವ ಜಯಂತೀ ರೋಹಿಣೀಯುತಾ ॥**

ಹಗಲು ಕರ್ಮಾನುಷ್ಠಾನ ಮಾಡುವುದರಿಂದ ಹಗಲಿರುವ ತಿಥಿಗಳು ಶುಭ. ರಾತ್ರಿ ಮಾಡುವ ವ್ರತಗಳಾದರೆ ರಾತ್ರಿಗೆ ತಿಥಿಯೋಗವಿರುವುದು ಉತ್ತಮ.

ಶ್ರಾವಣದ ಕೃಷ್ಣಪಕ್ಷದ ರಾತ್ರಿಯಲ್ಲಿರುವ ಅಷ್ಟಮಿಯು ಕೃಷ್ಣಾಷ್ಟಮೀ. ಅದೇ ರೋಹಿಣಿಯಿಂದ ಕೂಡಿದರೆ ಜಯಂತಿ.

ಈ ರೀತಿಯಾಗಿ ಮೇಲಿನ ವಾಕ್ಯಗಳೆಲ್ಲಾ ರಾತ್ರಿಗೆ ಅಷ್ಟಮೀವಿಧಾನವನ್ನು ಮಾಡುತ್ತವೆ. ಮತ್ತು ರಾತ್ರಿಯನ್ನು ಮುಖ್ಯಕಾಲವೆನ್ನುತ್ತವೆ. ಆದ್ದರಿಂದ ಮಧ್ಯರಾತ್ರಿ ಅಷ್ಟಮಿ ಇರುವ ದಿನದಂದು ವ್ರತಾಚರಣೆ ಸೂಕ್ತ.

ಮಧ್ಯರಾತ್ರಿಗೆ ಅಷ್ಟಮಿ ಇರುವುದು ಮುಖ್ಯ ಎನ್ನುವ ಪಕ್ಷದಲ್ಲಿ ಉದಾಹರಿಸಬಹುದಾದ ಬ್ರಹ್ಮವೈವರ್ತಪುರಾಣದ ಶ್ಲೋಕ ಹೀಗಿದೆ–

**ಅಷ್ಟಮೀಕರ್ಕ್ಷಸಂಯುಕ್ತಾ ರಾತ್ರ್ಯರ್ಧೇ ದೃಶ್ಯತೇ ಯದಿ।**
**ಸ ಏವ ಮುಖ್ಯ ಕಾಲಶ್ಚ ತತ್ರ ಜಾತಃ ಸ್ವಯಂ ಹರಿಃ ॥**
**(ಬ್ರಹ್ಮವೈವರ್ತಪುರಾಣ)**

'ಅಷ್ಟಮಿಯು ಪ್ರಜಾಪತಿಯ ನಕ್ಷತ್ರದೊಂದಿಗೆ (ರೋಹಿಣಿಯೊಂದಿಗೆ) ಕೂಡಿ ಮಧ್ಯರಾತ್ರಿಯಲ್ಲಿ ಕಂಡರೆ ಅದೇ ಮುಖ್ಯ ಕಾಲ, ಆ ಕಾಲದಲ್ಲೇ ಸ್ವತಃ ಶ್ರೀಹರಿ ಆವಿರ್ಭವಿಸಿದ್ದಾನೆ' ಎಂದು ಈ ಶ್ಲೋಕವು ಮಧ್ಯರಾತ್ರಿಯಲ್ಲಿ ಅಷ್ಟಮಿಗೆ ರೋಹಿಣಿಯೋಗವಿರುವುದೇ ಮುಖ್ಯಕಾಲ ಎಂದು ಹೇಳುತ್ತಿರುವುದ–ರಿಂದ ಅರ್ಧರಾತ್ರಿಗೆ ಅಷ್ಟಮಿ ಇರಬೇಕು ಹಗಲು ಮುಖ್ಯವಲ್ಲ.



## ಉದಯಾಷ್ಟಮೀ

**ಉತ್ತರ:**-ಮೇಲೆ ಹೇಳಿದ ಶ್ಲೋಕವನ್ನು ಉದಾಹರಿಸುವವರಿಗೆ ಎರಡು ಸಮಸ್ಯೆಗಳಿವೆ. ಮೊದಲನೆಯದಾಗಿ ಕೃಷ್ಣಾಷ್ಟಮಿ-ಜಯಂತಿ ಎರಡು ಬೇರೆ ಬೇರೆ ವ್ರತ ಎನ್ನುವವರ ಪ್ರಕಾರ ಇದು ಜಯಂತಿಯನ್ನು ಹೇಳುತ್ತಿರುವ ಶ್ಲೋಕ. ಏಕೆಂದರೆ ರೋಹಿಣೀಯೋಗವನ್ನು ಹೇಳುತ್ತಿದೆ. ಆದ್ದರಿಂದ ಕೃಷ್ಣಾಷ್ಟಮಿವ್ರತಕ್ಕೆ ಇದನ್ನು ಪ್ರಮಾಣವಾಗಿ ಸ್ವೀಕರಿಸುವುದು ಹೇಗೆ? ಕೃಷ್ಣ ಜಯಂತಿಗಷ್ಟೇ ಇದು ಪ್ರಮಾಣವಾದೀತು.

ಎರಡನೆಯ ಸಮಸ್ಯೆ ಮೇಲಿನ ಬ್ರಹ್ಮವೈವರ್ತಪುರಾಣದ ಶ್ಲೋಕದಿಂದ ನಾಲ್ಕನೇ ಶ್ಲೋಕ ಹೀಗೆ ಹೇಳುತ್ತದೆ-

**ವರ್ಜನೀಯಾ ಪ್ರಯತ್ನೇನ ಸಪ್ತಮೀ ಸಹಿತಾಷ್ಟಮೀ ।**
**ಸಾ ಸರ್ಕ್ಷಾಪಿ ನ ಕರ್ತವ್ಯಾ ಸಪ್ತಮೀ ಸಹಿತಾಷ್ಟಾಮೀ ।**
**ಅವಿದ್ಧಾಯಾಂ ಕ ಋಕ್ಷಾಯಂ ಜಾತೋ ದೇವಕಿನಂದನಃ ॥**

(ಬ್ರಹ್ಮವೈವರ್ತಪುರಾಣ)

ಪ್ರಯತ್ನಪೂರ್ವಕವಾಗಿ ಸಪ್ತಮೀಸಹಿತವಾದ ಅಷ್ಟಮಿಯನ್ನು ಬಿಡಬೇಕು. ನಕ್ಷತ್ರದೊಂದಿಗೆ ಇದ್ದರೂ ಸಪ್ತಮೀಸಹಿತ ಅಷ್ಟಮಿಯನ್ನು ಆಚರಿಸಬಾರದು. ಶ್ರೀಕೃಷ್ಣನು ಸಪ್ತಮೀವೇಧವಿಲ್ಲದ ರೋಹಿಣೀನಕ್ಷತ್ರವಿರುವಂದು ಅವತರಿಸಿದ್ದಾನೆ.

ಮಧ್ಯರಾತ್ರಿಯನ್ನು ಮುಖ್ಯಕಾಲ ಎಂದ ಬ್ರಹ್ಮವೈವರ್ತಪುರಾಣವೇ ಮುಂದೆ ಸಪ್ತಮೀವೇಧವಿರುವ ಅಷ್ಟಮಿಯಂದು ವ್ರತಾಚರಣೆ ಮಾಡಬಾರದು ಎಂದು ಸ್ಪಷ್ಟವಾಗಿ ಹೇಳುತ್ತಿದೆ. ಆದ್ದರಿಂದ ನಮಗೆ ತಿಳಿಯುತ್ತದೆ-ಅರ್ಧರಾತ್ರಿ ಕೃಷ್ಣ ಅವತರಿಸಿದ್ದರಿಂದ ಆ ದಿನದಲ್ಲಿ ಅದು ಮುಖ್ಯ ಕಾಲ. ಆ ಕಾಲದಲ್ಲಿ ಅರ್ಘ್ಯವನ್ನು ಕೊಡಬೇಕು. ಆದರೆ ಅಂದು ಸೂರ್ಯೋದಯಕ್ಕೆ ಸಪ್ತಮೀ ವೇಧವಿರಬಾರದು. ಏಕೆಂದರೆ ಸಪ್ತಮೀವೇಧವಿಲ್ಲದ ಅಷ್ಟಮಿಯಂದು ಕೃಷ್ಣ ಅವತರಿಸಿದ್ದಾನೆ. ಆದ್ದರಿಂದ ಸಪ್ತಮೀವೇಧವಿಲ್ಲದ ಅಷ್ಟಮಿಯಂದೇ ವ್ರತಾಚರಣೆಯನ್ನು ಮಾಡಬೇಕು.

ಸೂರ್ಯೋದಯಕ್ಕೆ ಸಪ್ತಮಿಯ ಸ್ಪರ್ಶವಿರುವ ದಿನದಲ್ಲಿ ವ್ರತಾಚರಣೆ ಮಾಡಬೇಕೇ ಬೇಡವೇ ಎಂಬುದನ್ನು ಈ ವಾಕ್ಯಗಳು ಸ್ಪಷ್ಟವಾಗಿ ಹೇಳುತ್ತಿಲ್ಲ. ರಾತ್ರಿಗೆ ಅಷ್ಟಮಿ ಇರಬೇಕೆಂದಷ್ಟೇ ಹೇಳುತ್ತವೆ.

ವಸಿಷ್ಠಸಂಹಿತೆಯ ವಾಕ್ಯ ಮುಖ್ಯಕಾಲವೆಂದೇನೋ ಹೇಳಿದೆ. ಆದರೆ 'ಭಗವಂತ ಆಗ ಅವತರಿಸಿದ್ದರಿಂದ' ಎಂದು ಕಾರಣ ಕೊಡುವ ಮೂಲಕ ಅವನ ಅವತಾರಕಾಲವನ್ನು ಉಲ್ಲೇಖಿಸಿದೆಯಷ್ಟೇ. ಹೊರತಾಗಿ ಹಗಲು ಸಪ್ತಮಿ ಇರಲಿ ಬಿಡಲಿ ರಾತ್ರಿ ಅಷ್ಟಮಿ ಇದ್ದರೆ ಸಾಕೆಂದೇನು ಹೇಳಿಲ್ಲ ಮತ್ತು ಕೃಷ್ಣ ಅವತರಿಸುವಾಗ ರಾತ್ರಿ ಅಷ್ಟಮಿ ಇತ್ತೆಂದಷ್ಟೇ ಹೇಳುತ್ತಿದೆ. ನಮಗೆ ಈ ವಿಷಯದಲ್ಲಿ ವಿವಾದವಿಲ್ಲ. ಕೃಷ್ಣ ಹುಟ್ಟುವಾಗ ದಿನ-ರಾತ್ರಿ ಎರಡು ಹೊತ್ತಿನಲ್ಲೂ ಅಷ್ಟಮಿ ಇತ್ತು. ಆದರೆ ಪ್ರಕೃತ ಚರ್ಚೆ ಹಗಲು ಸಪ್ತಮಿ ಇದ್ದು ರಾತ್ರಿಗೆ ಅಷ್ಟಮಿ ಇದ್ದರೆ ಅಂದು ಆಚರಿಸಬಹುದೇ? ಎಂಬುದಾಗಿ, ಈ ವಿಷಯಕ್ಕೆ ಸಂಬಂಧಿಸಿದಂತೆ ಮೇಲಿನ ಯಾವ ವಾಕ್ಯವೂ ಸ್ಪಷ್ಟವಾಗಿ ಏನನ್ನೂ ಹೇಳುತ್ತಿಲ್ಲ.

ಜಾಬಾಲಿ-ವೃದ್ಧಗೌತಮರ ವಾಕ್ಯಗಳೂ 'ಶ್ರಾವಣಮಾಸದ ಕೃಷ್ಣಪಕ್ಷದ ರಾತ್ರಿ ಸಂಬಂಧವಿರುವ ಅಷ್ಟಮಿ' ಎಂದಿದೆ. ಹಗಲು ಅಷ್ಟಮಿಯ ಸಂಬಂಧ ಬೇಕಿಲ್ಲ ಎಂದೇನು ಸ್ಪಷ್ಟವಾಗಿ ಹೇಳಿಲ್ಲ. ರಾತ್ರಿಗೆ ಅಷ್ಟಮಿ ಇರಬೇಕೆಂದು ಹೇಳಿರುವುದರಿಂದ 'ಹಗಲು ಅಷ್ಟಮಿ ಇದ್ದರೂ ಇಲ್ಲದಿದ್ದರೂ ತೊಂದರೆ ಏನಿಲ್ಲ' ಎಂಬ ಅರ್ಥ ಮಾಡಬಹುದಾದರೂ ಹಗಲಿಗೂ ಅಷ್ಟಮಿ ಇದ್ದು ರಾತ್ರಿಗೂ ಅಷ್ಟಮೀ ಇರುವಂತಹ ದಿನವನ್ನು ಉಲ್ಲೇಖಿಸುತ್ತದೆ ಎಂದೂ ಅರ್ಥ ಮಾಡಬಹುದಾಗಿದೆ. ಹಗಲಿನ ಬಗ್ಗೆ ಏನೂ ಮಾತಾಡಿಲ್ಲವಾದ್ದರಿಂದ. ಧರ್ಮಶಾಸ್ತ್ರದಲ್ಲಿ ಹೀಗೆ 'ಮಾಡಬಹುದಾದ' 'ಹಚ್ಚಬಹುದಾದ' ಅರ್ಥಗಳಿಗೆ ಬೆಲೆ ಇಲ್ಲ ಸ್ಪಷ್ಟವಾಗಿ ಹೇಳಿದರೆ ಮಾತ್ರ ಬೆಲೆ.

ಇನ್ನು ಹಗಲು ಕರ್ಮಾನುಷ್ಠಾನಕ್ಕೆ ಹಗಲು ತಿಥಿ ಇರಬೇಕು ರಾತ್ರಿ ಕರ್ಮಕ್ಕೆ ರಾತ್ರಿ ಇರಬೇಕೆಂಬ ವಾಕ್ಯವೂ ಸಾಮಾನ್ಯವಚನವಾಗಿದೆ. ವಿಶೇಷವಾಗಿ ಕೃಷ್ಣಾಷ್ಟಮಿಯನ್ನು ಕುರಿತು ಹೇಳಿದ್ದಲ್ಲ. ಅಷ್ಟೇ ಅಲ್ಲದೆ ಕೃಷ್ಣಾಷ್ಟಮಿಯು ರಾತ್ರಿವ್ರತ ಎಂದು ಹೇಗೆ ತೀರ್ಮಾನಿಸಲಾಗಿದೆ?



## ನಕ್ತವ್ರತ

**ಪ್ರಶ್ನೆ:-** ಇದು ಬಹಳವಿಚಿತ್ರವಾಗಿದೆ. ಕೃಷ್ಣಾಷ್ಟಮಿಯು ರಾತ್ರಿವ್ರತ ಎಂದು ಎಲ್ಲರಿಗೂ ತಿಳಿದಿದೆ. ಏಕೆಂದರೆ ನಾವು ರಾತ್ರಿಯಲ್ಲಿ ಅರ್ಘ್ಯಪ್ರದಾನ ಮಾಡುವುದು, ಕೃಷ್ಣ ಹುಟ್ಟಿದ್ದು ಕೂಡ ರಾತ್ರಿಯೇ ಅಲ್ಲವೇ?

**ಅಷ್ಟಮೀ ರೋಹಿಣೀಯುಕ್ತಾ ನಿಶ್ಯರ್ಧೇ ದೃಶ್ಯತೇ ಯದಾ (ದಿ)।**
**ಮುಖ್ಯಕಾಲಃ ಸ ವಿಜ್ಞೇಯಸ್ತತ್ರ ಜಾತೋ ಹರಿಃ ಸ್ವಯಮ್ ॥**
**(ವಸಿಷ್ಠಸಂಹಿತಾ)**

ಎಂಬುದಾಗಿಯೂ ಮಧ್ಯರಾತ್ರಿಯನ್ನು ಮುಖ್ಯ ಕಾಲ ಎಂದಿದ್ದಾರೆ. ಆಗ ಮಾಡುವ ವ್ರತವಾದ್ದರಿಂದ ಇದು ರಾತ್ರಿವ್ರತ (ನಕ್ತವ್ರತ). ಆದ್ದರಿಂದ ರಾತ್ರಿಗೆ ಅಷ್ಟಮಿ ಇರಬೇಕಾದ್ದು ಮುಖ್ಯ, ಆಗ ಅಷ್ಟಮಿ ಇದ್ದರೆ ಸಾಕು ಹಗಲು ಇದ್ದರೂ ಇಲ್ಲದಿದ್ದರೂ ಚಿಂತೆಯಿಲ್ಲ.

## ತುಂಬುದಿನದ ವ್ರತ

**ಉತ್ತರ:-** ಇಲ್ಲಿಯೇ ಸಮಸ್ಯೆ ಇರುವುದು. ಇದು ದಿನಪೂರ್ತಿ ಮಾಡುವ ವ್ರತ, ರಾತ್ರಿ ಮಾತ್ರದ ವ್ರತವಲ್ಲ, ರಾತ್ರಿಯಲ್ಲಷ್ಟೇ ಆಚರಿಸುವ 'ಕೋಜಾಗರೀವ್ರತ' ಇತ್ಯಾದಿಗಳನ್ನು ರಾತ್ರಿವ್ರತ ಎಂದೆನ್ನಬಹುದು, ಆದರೆ ಕೃಷ್ಣಾಷ್ಟಮಿ ಹಾಗಲ್ಲ, ಏಕೆಂದರೆ ಸ್ವತಃ ಆಚಾರ್ಯರೇ ಹಗಲು ಮೂರುಹೊತ್ತಿನಲ್ಲೂ ಪೂಜೆ ಮಾಡುವುದನ್ನು ಆದೇಶಿಸಿದ್ದಾರೆ. ಅದರಂತೆ ಭವಿಷ್ಯಪುರಾಣವೂ–

**ತ್ರಿಕಾಲಂ ಪೂಜಯೇದ್ದೇವಂ ದಿವಾರಾತ್ರೌ ವಿಶೇಷತಃ ।**
**ಅರ್ಧರಾತ್ರಾವಪಿ ತಥಾ ಪುಷ್ಪೈರ್ನಾನಾವಿಧೈರಪಿ ॥** (ಭವಿಷ್ಯಪುರಾಣ)

ಎಂದು ಮೂರು ಹೊತ್ತೂ, ರಾತ್ರಿಯೂ ಪೂಜೆ ಹೇಳಿರುವಾಗ ಇದು ರಾತ್ರಿವ್ರತವಾಗುವುದಾದರೂ ಹೇಗೆ? ಉಪವಾಸವನ್ನು ಬೆಳಗ್ಗೆಯೇ ಪ್ರಾರಂಭಿಸಬೇಕಾದ್ದರಿಂದ ಬೆಳಗ್ಗೆ ಸಂಕಲ್ಪ ಮಾಡಬೇಕು. ಹಾಗಾಗಿ ಇದು ದಿನಪೂರ್ತಿಯ ವ್ರತ. ಮಾರನೆಯ ದಿನದ ಪಾರಣೆಯೊಂದಿಗೆ ಮುಗಿಯುತ್ತದೆ ಯಾದ್ದರಿಂದಲೂ ದಿನಪೂರ್ತಿಯ ವ್ರತ. ಕೇವಲ ರಾತ್ರಿಯ ವ್ರತವಲ್ಲ. ಹಗಲು ವ್ರತ ಮಾಡಲು ಇರುವುದರಿಂದ ಹಗಲು ಅಷ್ಟಮಿ ಇರಬೇಕಲ್ಲವೇ?

## ಅರ್ಘ್ಯಕ್ಕೆ ಅಗ್ರಪೂಜೆ

**ಪ್ರಶ್ನೆ:-** ವ್ರತದಲ್ಲಿ ಉಪವಾಸವು ಅಂಗ ಮಾತ್ರ, ರಾತ್ರಿಯ ಅರ್ಘ್ಯ ಅಂಗಿ. ಆದ್ದರಿಂದ ಅರ್ಘ್ಯ ಮುಖ್ಯವಾದುದು. ಮುಖ್ಯವಾದ ಅರ್ಘ್ಯಬಿಡುವ ಕಾಲದಲ್ಲಿ ಅಷ್ಟಮಿ ಇರಬೇಕು. ಒಂದು ಪಕ್ಷ ಸೂರ್ಯೋದಯಕ್ಕೆ ಅಷ್ಟಮಿ ಇದ್ದು ರಾತ್ರಿಗೆ ಇಲ್ಲವಾದರೆ ಮುಖ್ಯಕಾಲಕ್ಕೆ ಅಷ್ಟಮಿ ಇಲ್ಲದಂತಾಗಿ ಇದು ಅಷ್ಟಮೀವ್ರತ ಎಂದೆನಿಸುವುದಿಲ್ಲ. ಆದ್ದರಿಂದ ಹಗಲಿಗಿಂತ ರಾತ್ರಿಗೆ ಅಷ್ಟಮಿ ಇರುವುದು ಮುಖ್ಯ.

## ಉಪವಾಸಕ್ಕೊಲಿದ ಕೃಷ್ಣ

**ಉತ್ತರ:-** ಉಪವಾಸವನ್ನು ಅಂಗವೆಂದೂ ಅರ್ಘ್ಯವನ್ನು ಅಂಗಿ ಎಂದೂ ತೀರ್ಮಾನಿಸುವುದಾದರೂ ಹೇಗೆ? ನಮ್ಮ ಪ್ರಕಾರ ಉಪವಾಸವೇ ಅಂಗಿ, ಅರ್ಘ್ಯ ಅಂಗವಾದ್ದರಿಂದ ಅಮುಖ್ಯ. ಹೇಗೆಂದರೆ ಸಂಕಲ್ಪದಲ್ಲಿ 'ಉಪವಾಸ ವ್ರತವನ್ನು ಆಚರಿಸುತ್ತೇನೆ' ಎಂದಲ್ಲವೇ ಹೇಳುವುದು, ಹಾಗಾಗಿ ಅದೇ ಮುಖ್ಯ.

ನೀವೇನಾದರೂ ಹೇಳಬಹುದು– ಸಂಕಲ್ಪವನ್ನು ಬದಲಾಯಿಸೋಣ 'ಕೃಷ್ಣಾಷ್ಟಮೀವ್ರತಕ್ಕಾಗಿ ಉಪವಾಸವಿದ್ದು ಅರ್ಘ್ಯ ಕೊಡುತ್ತೇನೆ' ಎಂದೂ ಸಂಕಲ್ಪ ಮಾಡಬಹುದಲ್ಲ ! ಎಂದು, ಆದರೆ ಹೀಗೆ ಹೇಳಲಾಗದು, ಏಕೆಂದರೆ ಸಂಕಲ್ಪ ಏನು ಮಾಡಬೇಕೆಂದು ಪುರಾಣವೇ ಹೇಳುತ್ತದೆ–

**ವಾಸುದೇವಂ ಸಮುದ್ದಿಶ್ಯ ಸರ್ವಪಾಪಪ್ರಶಾಂತಯೇ ।**
**ಉಪವಾಸಂ ಕರಿಷ್ಯಾಮಿ ಕೃಷ್ಣಾಷ್ಟಮ್ಯಾಂ ನಭಸ್ಯಹಮ್ ॥** (ಸ್ಮೃತಿಕೌಸ್ತುಭ)

ಎಲ್ಲ ಪಾಪಗಳ ಪರಿಹಾರಕ್ಕಾಗಿ ವಾಸುದೇವನನ್ನು ಉದ್ದೇಶಿಸಿ ನಭೋ-ಮಾಸದ ಕೃಷ್ಣಾಷ್ಟಮಿಯಂದು ಉಪವಾಸ ಮಾಡುತ್ತೇನೆಂದು ಸಂಕಲ್ಪಿಸಬೇಕು. ಹಾಗಾದರೆ ಕೃಷ್ಣಾಷ್ಟಮೀವ್ರತದ ಸಂಕಲ್ಪವೆಂದರೆ ಉಪವಾಸದ ಸಂಕಲ್ಪ, ಆದ್ದರಿಂದ ಉಪವಾಸವೇ ಪ್ರಧಾನ–ಅಂಗಿ. ಅರ್ಘ್ಯಪ್ರದಾನವು ಅಂಗ ಮಾತ್ರ.

ಅಷ್ಟೇ ಅಲ್ಲ ಉಪವಾಸವೆಂದರೆ ಏನು? ಅಭೋಜನದ ಸಂಕಲ್ಪವೇ ಉಪವಾಸ, ಊಟ ಮಾಡುವುದಿಲ್ಲ ಎಂಬ ಸಂಕಲ್ಪದೊಂದಿಗೆ ಅದನ್ನು

ಆಚರಿಸುವುದೇ ಉಪವಾಸ ಅಲ್ಲವೇ ! ಇದು ಬೆಳಗ್ಗಿನಿಂದಲೇ ಪ್ರಾರಂಭವಾಗುವಾಗ ಬೆಳಗ್ಗೆ ಈ ಸಂಕಲ್ಪಕಾಲದಲ್ಲಿ ಅಷ್ಟಮಿಯೇ ಇಲ್ಲದಿದ್ದರೆ 'ಅಷ್ಟಮೀದಿನದಂದು ಉಪವಾಸ ಮಾಡುತ್ತೇನೆ' ಎಂದು ಹೇಳುವುದಾದರೂ ಹೇಗೆ? ಇನ್ನು ಅಷ್ಟಮಿ ಪ್ರಾರಂಭವೇ ಆಗಿಲ್ಲ, ಆಗಲೇ ಅಷ್ಟಮಿಯ ಕಾರ್ಯಗಳನ್ನು ಮಾಡುವುದೇ? ಅದು ಅಷ್ಟಮೀವ್ರತದ ಫಲವನ್ನಾದರೂ ಹೇಗೆ ಕೊಡುತ್ತದೆ?

**'ಪ್ರಾತಃ ಸಂಕಲ್ಪಯೇದ್ ವಿದ್ವಾನ್ ಉಪವಾಸವ್ರತಾದಿಕಮ್'**(ಸ್ಮೃತಿಕೌಸ್ತುಭ) ಎಂಬ ವಾಕ್ಯದಂತೆ ಉಪವಾಸವ್ರತವನ್ನು ಪ್ರಾತಃಕಾಲದಲ್ಲಿ ಸಂಕಲ್ಪಿಸಬೇಕು. ಆ ಕಾಲದಲ್ಲಿ ಅಷ್ಟಮೀ ಇಲ್ಲದೆ ಸಂಕಲ್ಪ ಮಾಡುವುದು ಎಷ್ಟು ಸರಿ?

ಹಾಗೆಯೇ ಎಲ್ಲ ಕರ್ಮಗಳಲ್ಲಿ ಪ್ರಧಾನವಾದದ್ದನ್ನೇ ಸಂಕಲ್ಪಿಸುತ್ತೇವೆ. ಅದರಿಂದಲೇ ಅಂಗವನ್ನು ಸಂಕಲ್ಪಿಸಿದಂತಾಗುತ್ತದೆ. ಪ್ರಕೃತದಲ್ಲಿ ಉಪವಾಸವನ್ನೇ ಸಂಕಲ್ಪಿಸಿದ್ದೇವೆ–

**ಅದ್ಯ ಸ್ಥಿತ್ವಾ ನಿರಾಹಾರಃ ಶ್ವೋ ಭೂತೇ ಪರಮೇಶ್ವರ ।**
**ಭೋಕ್ಷ್ಯಾಮಿ ದೇವಕೀಪುತ್ರ ಅಸ್ಮಿನ್ ಜನ್ಮಾಷ್ಟಮೀವ್ರತೇ ॥**

ದೇವಕೀಪುತ್ರನೇ ! ಈ ಜನ್ಮಾಷ್ಟಮೀವ್ರತದಲ್ಲಿ ಇಂದು ನಿರಾಹಾರನಾಗಿದ್ದು ನಾಳೆ ಭೋಜನವನ್ನು ಮಾಡುತ್ತೇನೆ ಎಂದು ಸಂಕಲ್ಪಿಸುವುದಲ್ಲವೇ, ಇಲ್ಲೆಲ್ಲ ಉಪವಾಸವನ್ನು ಸಂಕಲ್ಪಿಸಲಾಗಿದೆ. ಆದ್ದರಿಂದಲೇ ಅರ್ಘ್ಯಪೂಜಾದಿ ಅಂಗಗಳು ಸಿದ್ಧಿಸುತ್ತವೆ. ಇಂದಿನವರೆಗಿನ ಆಚಾರದಲ್ಲಿಯೂ ಹಾಗೇ ಕಂಡಿದೆ ಅಲ್ಲವೇ ! ಉದಾ:– ಪವಮಾನಹೋಮವನ್ನು ಮಾಡುತ್ತೇನೆ ಎಂದು ಸಂಕಲ್ಪಿಸುತ್ತೇವೆ. ಹಾಗಾಗಿ ಅದು ಪ್ರಧಾನ, ಉಳಿದಂತೆ ನಡೆಸುವ ಪೂರ್ಣಾಹುತಿ ಇತ್ಯಾದಿಗಳೆಲ್ಲ ಅಂಗವಾದ್ದರಿಂದ ಅದನ್ನು ಸಂಕಲ್ಪಿಸುವುದಿಲ್ಲ. ಎಲ್ಲಿಯೂ ಕೇವಲ ಅಂಗವನ್ನು ಸಂಕಲ್ಪ ಮಾಡುವುದಿಲ್ಲ, ಹೊರತಾಗಿ ಕೇವಲ ಅಂಗಿಯನ್ನು ಸಂಕಲ್ಪಿಸುವುದಿದೆ. ಹೀಗೆ ಉಪವಾಸದ ಸಂಕಲ್ಪದಿಂದಲೇ ತಿಳಿಯುತ್ತದೆ ಈ ವ್ರತದಲ್ಲಿ ಉಪವಾಸ ಮುಖ್ಯ ಎಂದು, ಅಂತಹ ಉಪವಾಸ ಮಾಡುವಾಗ ಹಾಗೂ ಅದರ ಸಂಕಲ್ಪ ಮಾಡುವಾಗ ಅಷ್ಟಮಿ ಇಲ್ಲದಿದ್ದರೆ ಹೇಗಾದೀತು?

ಇನ್ನೂ ಒಂದು ಪ್ರಮಾಣವಿದೆ –

**ಕೇವಲೇನೋಪವಾಸೇನ ತಸ್ಮಿನ್ ಜನ್ಮದಿನೇ ಮಮ ।**
**ಸಪ್ತಜನ್ಮಕೃತಾತ್ ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥** (ಭವಿಷ್ಯಪುರಾಣ)

'ಆ ನನ್ನ ಜನ್ಮದಿನದಂದು ಕೇವಲ ಉಪವಾಸ ಮಾಡಿದರು ಸಾಕು, ಏಳು ಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಮುಕ್ತನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ' ಎಂದು ಭವಿಷ್ಯಪುರಾಣದಲ್ಲಿ ಭಗವಂತನೇ ಹೇಳಿದ್ದಾನೆ. ಇಲ್ಲಿ 'ಕೇವಲೇನೋಪವಾಸೇನ' ಎಂದರೆ ಉಳಿದ ಪೂಜೆ, ಅರ್ಘ್ಯ ಇತ್ಯಾದಿಗಳನ್ನು, ಅನಿವಾರ್ಯಕಾರಣಗಳಿಂದ ಮಾಡದಿದ್ದರೂ ಉಪವಾಸವನ್ನಂತು ಮಾಡಲೇಬೇಕು ಎಂದರ್ಥ, ಇದರಿಂದಲೂ ಗೊತ್ತಾಗುತ್ತದೆ- ಉಪವಾಸವೇ ಮುಖ್ಯ ಅಂಗಿ, ಅರ್ಘ್ಯಾದಿಗಳು ಅಂಗ ಎಂಬುದಾಗಿ. ಅಂಗದಲ್ಲಿ ಲೋಪವಾದರೂ ಅಂಗಿಯಲ್ಲಿ ಲೋಪವಾಗಬಾರದು ಆದ್ದರಿಂದ ಉಪವಾಸ ಪ್ರಾರಂಭಿಸುವಾಗ ಅಷ್ಟಮಿಯು ಇರಲೇಬೇಕು.



## ಅರ್ಘ್ಯಕ್ಕೆ ಅಷ್ಟಮೀ

**ಪ್ರಶ್ನೆ:-**

**ಕರ್ಮಣೋ ಯಸ್ಯ ಯಃ ಕಾಲಸ್ತತ್ಕಾಲವ್ಯಾಪಿನೀ ತಿಥಿಃ ।**
**ತಥಾ ಕರ್ಮಾಣಿ ಕುರ್ವೀತ ........................॥**

ಎಂಬ ವಾಕ್ಯ ಕರ್ಮಕಾಲಕ್ಕೆ ತಿಥಿ ಇರಬೇಕೆಂದು ವಿಧಿಸುತ್ತದೆ.

ಶ್ರಾದ್ಧಕ್ಕೆ ಕುತಪಕಾಲ ಮುಖ್ಯ. ಅದರಂತೆ ಶ್ರಾದ್ಧಾದಿಗಳನ್ನು ಮಾಡುವಾಗ ಕುತಪಕಾಲಕ್ಕೆ ಶ್ರಾದ್ಧತಿಥಿ ಇರುವ ದಿವಸವೇ ಮಾಡುತ್ತೇವೆ. ಅದರಂತೆ ಕೃಷ್ಣ ಹುಟ್ಟಿದ ಕಾಲಕ್ಕೆ ಅರ್ಘ್ಯ ಬಿಡುವುದು ಉಚಿತ, ಆದ್ದರಿಂದ ಅದು ಕರ್ಮಕಾಲ. ಆಗ ಅಷ್ಟಮೀ ಇರುವುದು ಮುಖ್ಯ, ಸೂರ್ಯೋದಯಕ್ಕೆ (ಹಿಂದಿನ) ಬೇರೆ ತಿಥಿ ಇದ್ದರೂ ಕುತಪಕಾಲಕ್ಕೆ ಶ್ರಾದ್ಧತಿಥಿ ಇದ್ದರೆ ಅಂದೇ ಶ್ರಾದ್ಧವನ್ನು ಆಚರಿಸಿದಂತೆ, ಸೂರ್ಯೋದಯಕ್ಕೆ ಸಪ್ತಮಿ ಇದ್ದರೂ ರಾತ್ರಿಗೆ ಅಷ್ಟಮೀ ಇದ್ದರೆ ಅಂದೇ ಕೃಷ್ಣಾಷ್ಟಮಿಯನ್ನು ಆಚರಿಸಬೇಕು. ಹೊರತಾಗಿ ಮಾರನೆಯ ದಿನ

ಸೂರ್ಯೋದಯಕ್ಕೆ ಅಷ್ಟಮಿ ಇದ್ದರೂ ರಾತ್ರಿ ಇಲ್ಲವಾದರೆ ಅಂದು ಅಷ್ಟಮಿ ಆಚರಿಸುವುದಾದರೂ ಹೇಗೆ? ಕರ್ಮಕಾಲಕ್ಕೆ ನವಮೀತಿಥಿಯಿದ್ದರೆ ಅದು ಕೃಷ್ಣಾಷ್ಟಮೀವ್ರತವಾಗುವುದಾದರೂ ಎಂತು ?

**ದಿವಾ ವಾ ಯದಿ ವಾ ರಾತ್ರೌ ನಾಸ್ತಿ ಚೇದ್ ರೋಹಿಣೀಕಲಾ ।**
**ರಾತ್ರಿಯುಕ್ತಾಂ ಪ್ರಕುರ್ವೀತ ವಿಶೇಷೇಣೇಂದುಸಂಯುತಾಮ್ ॥**

ಎಂಬ ವಾಕ್ಯವು 'ಹಗಲು-ರಾತ್ರಿ ರೋಹಿಣಿಯ ಸ್ಪರ್ಶ ಅಷ್ಟಮಿಗೆ ಇಲ್ಲವಾದರೆ, ಎಂದು ರಾತ್ರಿ ಅಷ್ಟಮಿ ಇದೆಯೋ ಅಂದೇ ಕೃಷ್ಣಾಷ್ಟಮಿಯನ್ನು ಆಚರಿಸಬೇಕು. ಏಕೆಂದರೆ ಚಂದ್ರನಿಂದ ಕೂಡಿದ್ದಲ್ಲವೇ ಅದು' ಎಂದು ಹೇಳುವ ಮೂಲಕ ಅಷ್ಟಮಿಗೆ ರಾತ್ರಿಯೋಗ ಮುಖ್ಯ. ಏಕೆಂದರೆ ಕೃಷ್ಣ ರಾತ್ರಿ ಹುಟ್ಟಿದ್ದಾನೆ, ರಾತ್ರಿಯಲ್ಲಿ ಚಂದ್ರನಿರುತ್ತಾನೆ, ಆ ಚಂದ್ರನಿಗೂ ಅರ್ಘ್ಯ ಕೊಡಲಿಕ್ಕೆ ಇದೆಯಲ್ಲವೇ, ಹಾಗಾಗಿ ಹಗಲಿನಲ್ಲಿ ಅಷ್ಟಮಿ ಇರಲಿ ಬಿಡಲಿ, ರಾತ್ರಿಯಂತೂ ಅಷ್ಟಮಿ ಇದ್ದರೆ ಮಾತ್ರ ವ್ರತವನ್ನಾಚರಿಸಬೇಕು. ಅರ್ಘ್ಯ ಕೊಡುವಾಗ ನವಮಿಯಿದ್ದರೆ ಅಷ್ಟಮೀ-ವ್ರತವಾಗುವುದಾದರೂ ಎಂತು ?



## ಉಪವಾಸಕ್ಕೆ ಅಷ್ಟಮೀ

**ಉತ್ತರ:-** ಅರ್ಘ್ಯಪ್ರದಾನವೇ ಪ್ರಧಾನ ಕರ್ಮವಾಗಿದ್ದರೆ ಆಗ ಮಧ್ಯರಾತ್ರಿ ಅಷ್ಟಮಿ ಇರಬೇಕು ಎನ್ನಬಹುದಿತ್ತು ಆದರೆ ಉಪವಾಸವೇ ಪ್ರಧಾನವಾಗಿ-ರುವುದರಿಂದ ಉಪವಾಸ ಪ್ರಾರಂಭಿಸುವ ದಿನ ಸೂರ್ಯೋದಯಕ್ಕೆ ಅಷ್ಟಮಿ ತಿಥಿ ಇರಬೇಕಾಗುತ್ತದೆ. ಕುತಪಕಾಲಕ್ಕೆ ಶ್ರಾದ್ಧತಿಥಿಯಿರುವಂತೆ ಉಪವಾಸಕಾಲಕ್ಕೆ ಅಷ್ಟಮಿ ಇರಬೇಕಾಗುತ್ತದೆ.

ಇನ್ನು ಅರ್ಘ್ಯಕಾಲಕ್ಕೆ ನವಮಿ ಇದ್ದರೆ ಅಷ್ಟಮಿವ್ರತವಾಗುವುದೆಂತು? ಎಂಬ ಸಮಸ್ಯೆಗೆ ಹೀಗೆ ಉತ್ತರ ಹೇಳಬಹುದಾಗಿದೆ-

**ಯಾಂ ತಿಥಿಂ ಸಮನುಪ್ರಾಪ್ಯ ಉದಯಂ ಯಾತಿ ಭಾಸ್ಕರಃ ।**
**ಸಾ ತಿಥಿಃ ಸಕಲಾ ಜ್ಞೇಯಾ ಸ್ನಾನದಾನಜಪಾದಿಷು ॥**

**ವ್ರತೋಪವಾಸಸ್ನಾನಾದೌ ಘಟಿಕೈಕಾ ಯದಾ ಭವೇತ್ ।**
**ಉದಯೇ ಸಾ ತಿಥಿರ್ಗ್ರಾಹ್ಯಾ .............॥** (ಸ್ಮೃತಿಮುಕ್ತಾಫಲ)

ಸೂರ್ಯೋದಯಕ್ಕೆ ಒಂದು ಘಳಿಗೆಯಾದರೂ ಯಾವ ತಿಥಿ ಇದೆಯೋ ಅದನ್ನೇ ವ್ರತ-ಉಪವಾಸಾದಿಗಳಿಗೆ ಸಂಪೂರ್ಣ ದಿನ ಇದೆ ಎಂದು ತಿಳಿಯಬೇಕು ಎಂಬುದಾಗಿ ಸ್ಮೃತಿ ವಾಕ್ಯಗಳೇ ಹೇಳುತ್ತವೆಯಾದ್ದರಿಂದ ರಾತ್ರಿಗೂ ಅಷ್ಟಮಿ ಇದೆ ಎಂದೇ ಅರ್ಥ. ಸೂರ್ಯೋದಯಕ್ಕೆ ಅಷ್ಟಮಿ ಇದ್ದರೆ ಅಂದು ದಿನಪೂರ್ತಿ ಅಷ್ಟಮಿಯೇ ಆದ್ದರಿಂದ ರಾತ್ರಿಗೆ ನವಮಿ ತಿಥಿ ಪ್ರಾರಂಭವಾಗಿದ್ದರೂ ಅರ್ಘ್ಯಾದಿಗಳನ್ನು ಅಷ್ಟಮಿಯೇ ಆಚರಿಸಿದಂತಾಗುತ್ತದೆ.

**ಮುಹೂರ್ತೇನಾಽಪಿ ಸಂಯುಕ್ತಾ ಸಂಪೂರ್ಣಾ ಸಾಷ್ಟಮೀ ಭವೇತ್ ।**
**ಕಿಂಪುನರ್ನವಮೀಯುಕ್ತಾ ಕುಲಕೋಟ್ಯಸ್ತು ಮುಕ್ತಿದಾ ॥** (ಸ್ಮೃತಿಕೌಸ್ತುಭ)

ಸೂರ್ಯೋದಯಕ್ಕೆ ಒಂದು ಮುಹೂರ್ತ ಅಷ್ಟಮಿ ಇದ್ದರೂ ಅದು ಸಂಪೂರ್ಣ ಅಷ್ಟಮಿ ಆಗುತ್ತದೆ. ಇನ್ನು ನವಮೀಯುಕ್ತವಾದ ಅಷ್ಟಮಿಯಂತು ಕುಲಕೋಟಿಗಳನ್ನೂ ಉದ್ಧರಿಸುವುದು ಎಂಬ ವಾಕ್ಯವು ನವಮೀಯುಕ್ತವಾದ ಅಷ್ಟಮಿಯು ಉತ್ತಮವೆಂದು ತಿಳಿಸುತ್ತದೆ.

ಇನ್ನು 'ರಾತ್ರಿಯುಕ್ತಾಂ ಪ್ರಕುರ್ವೀತ........' ಎಂಬ ವಾಕ್ಯಕ್ಕೆ ಹೀಗೆ ಸಮಾಧಾನ- ಎರಡು ದಿನ ಸೂರ್ಯೋದಯಕ್ಕೆ ಅಷ್ಟಮಿ ಇದ್ದರೆ ರಾತ್ರಿಯೂ ಇರುವ ಅಷ್ಟಮಿಯಂದು ವ್ರತವನ್ನಾಚರಿಸಬೇಕು ಎಂದರ್ಥ. ಹೊರತಾಗಿ 'ಸೂರ್ಯೋದಯಕ್ಕೆ ಅಷ್ಟಮಿ ಇಲ್ಲದಿದ್ದರೂ ರಾತ್ರಿ ಇದ್ದರೆ ಸಾಕು ಅಂದು ವ್ರತವನ್ನು ಆಚರಿಸಿ' ಎಂದೇನು ಹೇಳಿಲ್ಲ.



## ಪೂರ್ವವಿದ್ಧವೇ ಪರ

**ಪ್ರಶ್ನೆ:**-'ಸೂರ್ಯೋದಯಕ್ಕೆ ಸಪ್ತಮಿಯಿದ್ದರೂ, ರಾತ್ರಿಗೆ ಅಷ್ಟಮಿಯಿದ್ದರೆ ಸಾಕು ಅಂದು ಕೃಷ್ಣಾಷ್ಟಮೀವ್ರತವನ್ನಾಚರಿಸಬೇಕು' ಎಂದು ಸ್ಪಷ್ಟವಾಗಿ ಹೇಳಿರುವ ವಾಕ್ಯಗಳಿಲ್ಲವೆಂದಲ್ಲವೇ ನಿಮ್ಮ ಅಭಿಪ್ರಾಯ. ಅಂತಹ ವಾಕ್ಯಗಳನ್ನು ಹೇಳೋಣ-

**ಕಾರ್ಯಾ ವಿದ್ಧಾ ತು ಸಪ್ತಮ್ಯಾ ರೋಹಿಣೀಸಹಿತಾಷ್ಟಮೀ ।**
**ತತ್ರೋಪವಾಸಂ ಕುರ್ವೀತ ತಿಥಿಭಾಂತೇ ಚ ಪಾರಣಮ್ ॥**
**(ಪದ್ಮಪುರಾಣ)**

ಸಪ್ತಮೀವಿದ್ಧವಾದ (ಸಪ್ತಮೀಸಹಿತವಾದ) ರೋಹಿಣೀಯುಕ್ತವಾದ ಅಷ್ಟಮೀ ತಿಥಿಯಂದು ಉಪವಾಸವನ್ನು ಆಚರಿಸಬೇಕು. ತಿಥಿ-ನಕ್ಷತ್ರಾಂತದಲ್ಲಿ ಪಾರಣೆ.

**ಜನ್ಮಾಷ್ಟಮೀ ರೋಹಿಣೀ ಚ ಶಿವರಾತ್ರಿಸ್ತಥೈವ ಚ ।**
**ಪೂರ್ವವಿದ್ಧೈವ ಕರ್ತವ್ಯಾ ತಿಥ್ಯಂತೇ ಪಾರಣಂ ಭವೇತ್॥**

ಜನ್ಮಾಷ್ಟಮೀ, ರೋಹಿಣೀ,ಜಯಂತೀ, ಶಿವರಾತ್ರಿ ಇವುಗಳನ್ನು ಪೂರ್ವವಿದ್ಧ-ವಾದದ್ದನ್ನೇ (ಸಪ್ತಮೀಸಹಿತವಾದದ್ದನ್ನು) ಮಾಡಬೇಕು, ತಿಥ್ಯಂತದಲ್ಲಿ ಪಾರಣೆ.

ಈ ಎಲ್ಲಾ ವಾಕ್ಯಗಳು ಸ್ಪಷ್ಟವಾಗಿ ಸಪ್ತಮೀಸಹಿತವಾದ ಅಷ್ಟಮಿಯಂದು ಉಪವಾಸವ್ರತವನ್ನು ಆಚರಿಸಿ ಎಂದೇ ಹೇಳುತ್ತವೆ. ಇದರರ್ಥ ಸಪ್ತಮೀ ಸೂರ್ಯೋದಯಕ್ಕೆ ಇದ್ದರೂ ಅಂದೇ ರಾತ್ರಿಗೆ ಅಷ್ಟಮಿ ಇದ್ದರೆ ಅಂದಿನ ದಿನವೇ ವ್ರತಾಚರಣೆಗೆ ಸೂಕ್ತ. ರಾತ್ರಿಗೆ ಅಷ್ಟಮಿ ಇರುವುದು ಮುಖ್ಯ ಎಂಬುದಾಗಿದೆ.

## ಪೂರ್ವಾಪರವಿರೋಧ

**ಉತ್ತರ:-** ಹೌದು ಈ ವಾಕ್ಯಗಳು ಸಪ್ತಮೀವೇಧವಿದ್ದರೂ ಅಂದೇ ಅಷ್ಟಮಿಯನ್ನಾಚರಿಸಬೇಕು ಎನ್ನುತ್ತಿವೆ. ಆದರೆ ಅದೇ ಪದ್ಮಪುರಾಣದಲ್ಲಿ ತಾವು ಸೂಚಿಸುವ ಶ್ಲೋಕದ ಮುಂದಿ ನ ಶ್ಲೋಕ ಹೀಗಿದೆ-

**ಕಲಾ ಕಾಷ್ಠಾ ಮುಹೂರ್ತೇಽಪಿ ಯದಾ ಕೃಷ್ಣಾಷ್ಟಮೀ ತಿಥಿಃ ।**
**ನವಮ್ಯಾಂ ಸೈವ ಯಾ ಗ್ರಾಹ್ಯಾ ಸಪ್ತಮೀಸಂಯುತಾ ನಹಿ ॥**

ಕಲಾ-ಕಾಷ್ಠಾ-ಮುಹೂರ್ತದಷ್ಟಾದರೂ ಎಂದು ಕೃಷ್ಣಾಷ್ಟಮಿ ಇದೆಯೋ ಅಂದೇ ನವಮೀ ತಿಥಿ ಇದ್ದರೂ ವ್ರತವನ್ನಾಚರಿಸಬೇಕು ಹೊರತಾಗಿ ಸಪ್ತಮೀಸಹಿತವಾದ ಅಷ್ಟಮಿಯಂದು ವ್ರತ ಮಾಡಬಾರದು.

**ಪಲವೇಧೇನ ರಾಜೇಂದ್ರ ಸಪ್ತಮ್ಯಾಮಷ್ಟಮೀಂ ತ್ಯಜೇತ್ ।**
**ಸುರಾಯಾ ಬಿಂದುನಾ ಸ್ಪೃಷ್ಟಂ ಗಂಗಾಂಭಃಕಲಶಂ ಯಥಾ ॥**

ಸ್ವಲ್ಪ ಸಪ್ತಮಿಯ ಸ್ಪರ್ಶವಿದ್ದರೂ ಆ ಅಷ್ಟಮಿಯನ್ನು ಬಿಡಬೇಕು. ಒಂದು ತೊಟ್ಟು ಸುರೆ ಸೇರಿದರು ಗಂಗಾಜಲವನ್ನು ಬಿಡುತ್ತೇವಲ್ಲವೇ.

ಇದೇ ಪದ್ಮಪುರಾಣದಲ್ಲಿ ತಾವು ಉಲ್ಲೇಖಿಸುವ ಶ್ಲೋಕದ ಹಿಂದಿನ ಶ್ಲೋಕಗಳು ಇಂತಿವೆ.

**ಪೂರ್ವವಿದ್ಧಾ ನ ಕರ್ತವ್ಯಾ ತೃತೀಯಾ ಷಷ್ಠಿರೇವ ಚ ।**
**ಅಷ್ಟಮ್ಯೇಕಾದಶೀ ಭೂತಾ  ಧರ್ಮಕಾಮಾರ್ಥವಾಂಛಿಭಿಃ ॥**

**ವರ್ಜಯಿತ್ವಾ ಪ್ರಯತ್ನೇನ ಸಪ್ತಮೀ ಸಂಯುತಾಷ್ಟಮೀಮ್ ।**
**ವಿನಾ ಋಕ್ಷಂ ಪ್ರಕರ್ತವ್ಯಾ ನವಮೀಸಂಯುತಾಷ್ಟಮೀ ॥**

ಹಿಂದಿನ ತಿಥಿಯಿಂದ ಯುಕ್ತವಾದ ತದಿಗೆ, ಷಷ್ಠಿ, ಅಷ್ಟಮೀ, ಏಕಾದಶೀ, ಚತುರ್ದಶಿಗಳನ್ನು ಧರ್ಮಕಾಮಾರ್ಥವನ್ನು ಅಪೇಕ್ಷಿಸುವವರು ಆಚರಿಸಬಾರದು. ಪ್ರಯತ್ನಪೂರ್ವಕವಾಗಿ ಸಪ್ತಮೀಸಹಿತಅಷ್ಟಮಿಯನ್ನು ಬಿಡಬೇಕು. ರೋಹಿಣಿನಕ್ಷತ್ರ ಇಲ್ಲದಿದ್ದರೂ ಚಿಂತೆಯಿಲ್ಲ ನವಮೀಸಹಿತವಾದ ಅಷ್ಟಮಿಯಂದು ವ್ರತವನ್ನಾಚರಿಸಬೇಕು.

**ಕೃತ್ತಿಕಾಕಲಯಾ ವಾಽಪಿ ಸಪ್ತಮೀಕಲಯಾಽಪಿ ವಾ ।**
**ಯುಕ್ತಾಷ್ಟಮೀ ತು ನ ಗ್ರಾಹ್ಯಾ ತಸ್ಯಾಂ ಪೂಜಾ ತು ನಿಷ್ಫಲಾ ॥**

(ಪ್ರಶ್ನಸಂಹಿತೆ-ಪಂಚರಾತ್ರಸಂಹಿತೆ)

ಸ್ವಲ್ಪ ಕೃತ್ತಿಕೆ ಇಂದಾಗಲೀ ಸ್ವಲ್ಪ ಸಪ್ತಮೀ ಇಂದಾಗಲೀ (ಸಪ್ತಮೀಕಲೆ ಇಂದಾಗಲಿ) ಯುಕ್ತವಾದ ಅಷ್ಟಮಿಯ ಅಗ್ರಾಹ್ಯವೆನಿಸಿದೆ. ಹೀಗೆ ವೇಧವಿರು-ವಂದು ಮಾಡಿದ ಪೂಜೆಯು ನಿಷ್ಫಲವೆನಿಸುತ್ತದೆ.

## ಆನಂದತೀರ್ಥರ ಬೆಳಕಲ್ಲಿ ಹೆಜ್ಜೆ

**ಪ್ರಶ್ನೆ:**-ಹೀಗೆ ಎರಡು ಪಕ್ಷದಲ್ಲಿ ಸ್ಪಷ್ಟವಾದ ವಾಕ್ಯಗಳು ಇರುವಾಗ ನಿರ್ಣಯಿಸುವುದಾದರೂ ಹೇಗೆ ? ಅವರವರ ಸಂಪ್ರದಾಯದಂತೆ ಮಾಡಿ ಕೊಂಡು ಹೋಗಬಹುದಾಗಿದೆ.

**ಉತ್ತರ:-** ಇಲ್ಲ ಎರಡೂ ವಿರುದ್ಧಪಕ್ಷಗಳು ಕಂಡಾಗ ಒಂದು ಮಾತ್ರ ಸರಿ ಇರಲು ಸಾಧ್ಯ, ಅದನ್ನೇ ನಾವು ಗುರುತಿಸಬೇಕಾಗಿದೆ. ಏಕೆಂದರೆ ಯಾವುದೇ ವೈಷ್ಣವ ಕೃಷ್ಣಾಷ್ಟಮಿಯನ್ನು ತಪ್ಪಾಗಿ ಆಚರಿಸಬಾರದಲ್ಲವೇ? ಹೀಗೆ ವಿರುದ್ಧವಾದ ವಾಕ್ಯಗಳಿರುವಾಗ ಆಚಾರ್ಯರು ಯಾವ ನಿರ್ಣಯವನ್ನು ಕೊಟ್ಟಿದ್ದಾರೋ ಅದನ್ನೇ ಇಲ್ಲಿಯೂ ಅನುಸರಿಸಬಹುದಾದರೆ ಅದೇ ಉಚಿತವಲ್ಲವೇ? ಹಾಗಾದರೆ ಆಚಾರ್ಯರು ಇಂತಹದ್ದೇ ಪ್ರಸಂಗದಲ್ಲಿ ನಿರ್ಣಯಿಸಿದ್ದನು ನೋಡೋಣ- ದಶಮೀವಿದ್ಧವಾದ ಏಕಾದಶಿಯನ್ನು ಉಪವಾಸ ಮಾಡಬೇಕು ಎಂದು ಕೆಲವು ಸ್ಮೃತಿಗಳು ಹೇಳಿದರೆ ವಿದ್ಧೈಕಾದಶೀ ಉಪವಾಸ ಮಾಡಬಾರದು ಎಂದು ಹಲವು ಸ್ಮೃತಿಗಳು ಹೇಳಿದವು-

**ಏಕಾದಶೀ ಭವೇತ್ ಕಾಚಿತ್ ದಶಮ್ಯಾ ದೂಷಿತಾ ತಿಥಿಃ ।**
**ವೃದ್ಧಿಪಕ್ಷೇ ಭವೇತ್ ದೋಷಃ ಕ್ಷಯಪಕ್ಷೇ ತು ಪುಣ್ಯದಾ ॥** (ವಿಷ್ಣುರಹಸ್ಯ)

ದಶಮಿಯುಕ್ತವಾದ ಏಕಾದಶಿಯು ದೂಷಿತವಾಗುತ್ತದೆ. ಶುಕ್ಲಪಕ್ಷದಲ್ಲಿ ದೋಷ, ಕೃಷ್ಣಪಕ್ಷದಲ್ಲಿ ದೋಷವಿಲ್ಲ (ಆದ್ದರಿಂದ ಕೃಷ್ಣಪಕ್ಷದ ವಿದ್ಧೈಕಾದಶಿ ಉಪವಾಸ ಮಾಡಬಹುದು)

**ಏಕಾದಶೀಂ ದಶಾವಿದ್ಧಾಂ ವರ್ಧಮಾನೇ ವಿವರ್ಜಯೇತ್ ।**
**ಕ್ಷಯಮಾರ್ಗಸ್ಥಿತೇ ಸೋಮೇ ಲಂಘಯೇತ್ ದಶಮೀಯುತಾಮ್ ॥**
**(ಕುರ್ವೀತ ದಶಮೀಯುತಾಮ್ ॥)**

(ಭವಿಷ್ಯಪುರಾಣ)

ಶುಕ್ಲಪಕ್ಷದಲ್ಲಿ ದಶಮೀವಿದ್ಧವಾದ ಏಕಾದಶಿಯಂದು ಉಪವಾಸ ಮಾಡಬೇಕಿಲ್ಲ, ಕೃಷ್ಣಪಕ್ಷದಲ್ಲಾದರೆ ದಶಮೀವಿದ್ಧವಾದ ಏಕಾದಶಿಯಂದು ಉಪವಾಸ ಮಾಡಬೇಕು. ಹೀಗೆ ದಶಮೀವೇಧವಿದ್ದರೆ ಕೃಷ್ಣಪಕ್ಷದ ಏಕಾದಶಿ ಉಪವಾಸ ಮಾಡಬೇಕೆಂದು ಮೇಲಿನ ವಾಕ್ಯ ಹೇಳಿದರೆ,

**ಕಲಾಕಾಷ್ಠಾऽಪಿ ಯಾ ಚೈವ ದೃಶ್ಯತೇ ದಶಮೀ ವಿಭೋ ।**
**ಏಕಾದಶ್ಯಾಂ ತು ಸೇನಾನೀ ಕರ್ತವ್ಯಾ ನ ಕಥಂಚನ ॥**

ಹೇ ಸೇನಾನಿಯೇ ! ಏಕಾದಶೀಯಂದು ಸ್ವಲ್ಪವಾದರೂ ದಶಮೀ ವೇಧವಿದ್ದರೆ ಯಾವುದೇ ಕಾರಣಕ್ಕೂ ಉಪವಾಸ ಮಾಡಬಾರದು.

**ಲವವೇಧೇऽಪಿ ವಿಪ್ರೇಂದ್ರ ದಶಮ್ಯೇಕಾದಶೀಂ ತ್ಯಜೇತ್ ।**
**ಸುರಾಯಾ ಬಿಂದುನಾ ಸ್ಪೃಷ್ಟಂ ಗಂಗಾಂಭಃಕಲಶಂ ಯಥಾ ॥**

ಬ್ರಾಹ್ಮಣೋತ್ತಮನೇ! ದಶಮೀವೇಧವಿದ್ದರೂ ಏಕಾದಶಿಯನ್ನು ಬಿಡಬೇಕು. ಗಂಗೆಯ ಕಲಶಕ್ಕೆ ಒಂದು ತೊಟ್ಟು ಸುರೆ ಸೋಕಿದರೂ ಬಿಡಬೇಕು ಹೇಗೋ ಹಾಗೆ.

ಈ ರೀತಿಯಾಗಿ ದಶಮೀವೇಧವಿದ್ದ ಏಕಾದಶಿ ಉಪವಾಸ ಮಾಡಬೇಕು– ಉಪವಾಸಮಾಡಬಾರದು ಎಂದು ಎರಡು ವಿಧವಾದ ವಾಕ್ಯಗಳಿರುವಾಗ ಆಚಾರ್ಯರು ನೀಡಿದ ತೀರ್ಮಾನ– 'ದಶಮೀವೇಧವಿದ್ದರೆ ಅಂದು ಏಕಾದಶೀ ಉಪವಾಸವನ್ನು ಮಾಡಬಾರದು' ಎಂದು. ಅದರಂತೆಯೇ ಪ್ರಕೃತದಲ್ಲಿಯೂ 'ಸಪ್ತಮೀವೇಧವಿದ್ದರೆ ಅಂದು ಅಷ್ಟಮೀವ್ರತವನ್ನು ಆಚರಿಸಬಾರದು' ಎಂಬ ವಾಕ್ಯಗಳನ್ನೇ ಆದರಿಸಿದರೆ ಶ್ರೀಮದಾಚಾರ್ಯರು ಹಾಕಿಕೊಟ್ಟ ದಾರಿಯಲ್ಲಿ ನಡೆದಂತಾಗುತ್ತದೆಯಲ್ಲವೆ !

ಇಲ್ಲಿ ಒಂದು ಶಂಕೆಗೆ ಅವಕಾಶವಿದೆ – ಕೃಷ್ಣಾಷ್ಟಮಿಗೂ ಏಕಾದಶಿಗೂ ಏನು ಸಂಬಂಧ? ಏಕಾದಶಿಯಂತೆಯೇ ಅಷ್ಟಮಿಯಲ್ಲಿಯೂ ವೇಧದೋಷವಿದ್ದಲ್ಲಿ ಬಿಡಬೇಕೆಂಬುದನ್ನು ಯಾವ ವಾಕ್ಯ ಹೇಳಿದೆ ? ಎಂಬುದಾಗಿ. ಈ ಸಂಶಯಕ್ಕೆ ಹೀಗೆ ಪರಿಹಾರ ಹೇಳಬಹುದು– 'ಎರಡೂ ಉಪವಾಸವ್ರತಗಳೇ' ಎಂಬ ಸಾಮ್ಯವಂತೂ ಇದೆ.

ಅದಕ್ಕಿಂತಲೂ ಹೆಚ್ಚಾಗಿ ಏಕಾದಶಿಯಂತೆಯೇ ಅಷ್ಟಮಿಯೂ ವೇಧರಹಿತವಾಗಿರಬೇಕೇಂಬ ವಾಕ್ಯಗಳು ಇವೆ–

**ಪೂರ್ವವಿದ್ಧಾ ಯಥಾ ನಂದಾ ವರ್ಜಿತಾ ಶ್ರವಣಾನ್ವಿತಾ ।**
**ತಥಾಷ್ಟಮೀಂ ಪೂರ್ವವಿದ್ಧಾಂ ಸಋಕ್ಷಾಂ ಚ ವಿವರ್ಜಯೇತ್ ॥**

(ಪಾದ್ಮೇ)

ಶ್ರವಣನಕ್ಷತ್ರದಿಂದ ಕೂಡಿದ್ದರೂ ಪೂರ್ವವಿದ್ಧವಾದ ಏಕಾದಶಿಯನ್ನು ಹೇಗೆ ಬಿಡಲಾಗಿದೆಯೋ ಹಾಗೆಯೇ ಸಪ್ತಮೀವಿದ್ಧವಾದ ಅಷ್ಟಮಿಯು ರೋಹಿಣೀನಕ್ಷತ್ರದಿಂದ ಕೂಡಿದ್ದರೂ ವ್ರತವನ್ನಾಚರಿಸಬಾರದು.

**ಇತ್ಥಂ ಶುದ್ಧೇನ ಲಿಖಿತಾ ಯೋಗಾದ್ ಬಹುವಿಧಾಷ್ಟಮೀ ।**
**ತ್ಯಾಜ್ಯಾ ವಿದ್ಧಾ ಚ ಸಪ್ತಮ್ಯಾ ಸಾ ವಿದ್ಧೈಕಾದಶೀ ಯಥಾ ॥**

(ಬ್ರಹ್ಮವೈವರ್ತೇ ಸೂತೋಕ್ತೌ)

ರೋಹಿಣೀಸಹಿತವಾದ ನಾನಾವಿಧವಾದ ಅಷ್ಟಮಿಗಳನ್ನು ಹೇಳಿದ್ದು ಶುದ್ಧವಾದ ಅಷ್ಟಮೀಯನ್ನೇ, ದಶಮೀವಿದ್ಧವಾದ ಏಕಾದಶಿಯನ್ನು ಹೇಗೆ ಬಿಡುತ್ತೇವೆಯೋ ಹಾಗೆ ಸಪ್ತಮಿವಿದ್ಧವಾದ ಅಷ್ಟಮಿಯನ್ನು ಬಿಡಬೇಕು.

ಈ ರೀತಿಯ ವಾಕ್ಯಗಳೆಲ್ಲಾ ಏಕಾದಶಿಯಂತೆಯೇ ಅಷ್ಟಮೀತಿಥಿಯನ್ನು ವೇಧದೋಷವಿದ್ದರೆ ಬಿಡಬೇಕೆಂದು ಸ್ಪಷ್ಟವಾಗಿ ಹೇಳುತ್ತಿರುವಾಗ ದಶಮೀವೇಧವಿರುವ ಏಕಾದಶಿಯನ್ನು ಬಿಡುವ ಸಂಪ್ರದಾಯ ಇರುವ ವೈಷ್ಣವರೆಲ್ಲರೂ ಸಪ್ತಮೀವೇಧವಿರುವ ಅಷ್ಟಮಿಯನ್ನು ಬಿಡಬೇಕಲ್ಲವೇ !

ಅರುಣೋದಯವೇಧವಿದ್ದರೂ ಏಕಾದಶಿಯನ್ನು ಬಿಡಬೇಕು. ಈ ನಿಯಮವು ಅಷ್ಟಮಿಗೆ ಅನ್ವಯಿಸುವುದಿಲ್ಲ, ಏಕೆಂದರೆ

**ಪ್ರತಿಪತ್‌ಪ್ರಭೃತಯಃ ಸರ್ವಾ ಉದಯಾದುದಯಂ ರವೇಃ ।**
**ಸಂಪೂರ್ಣಾ ಇತಿ ವಿಖ್ಯಾತಾ ಹರಿವಾಸರವರ್ಜಿತಾ ॥**

**ಅರುಣೋದಯಕಾಲೇ ತು ದಶಮೀ ಯದಿ ದೃಶ್ಯತೇ ।**
**ನ ತತ್ರೈಕಾದಶೀ ಕಾರ್ಯಾ ....॥** (ಕೃಷ್ಣಾಮೃತಮಹಾರ್ಣವ)

ಎಂದು ಏಕಾದಶಿಗೆ ಮಾತ್ರ ಅರುಣೋದಯಕಾಲದಲ್ಲಿದ್ದರೇ ವ್ರತವನ್ನು ಆಚರಿಬೇಕು. ಉಳಿದೆಲ್ಲ ತಿಥಿಗಳು ಸೂರ್ಯೋದಯಕ್ಕೆ ಇರಬೇಕು ಎಂದು ವಿಶೇಷ ವಿಧಾನವಿರುವುದರಿಂದ.

**ಪ್ರಶ್ನೆ:-** ಶಾಸ್ತ್ರಗಳಲ್ಲಿ ವಿರುದ್ಧವಾದ ವಾಕ್ಯಗಳು ಕಂಡಾಗ ನಿರ್ಣಯ ಮಾಡುವ ಕ್ರಮ ಹೀಗಿದೆ. ಸಾವಕಾಶ ವಾಕ್ಯಗಳನ್ನು ಕೈಬಿಡುವುದು; ನಿರವಕಾಶ ಪ್ರಮಾಣ ವಾಕ್ಯಗಳಿರುವಾಗ. ನಿರವಕಾಶತ್ವೇನ ಪ್ರಬಲವಾಕ್ಯಗಳು ಸಾವಕಾಶವಾಕ್ಯಗಳನ್ನು ಬಾಧಿಸುತ್ತವೆ.

ನಿರವಕಾಶವಾಕ್ಯಗಳೆಂದು ತಿಳಿಯುವ ಬಗೆಯಾದರೂ ಸಾಮಾನ್ಯವಾಗಿ ಹೀಗಿದೆ. ವಾಕ್ಯಗಳಲ್ಲಿ ನಿಶ್ಚಯ – ಏವ–ಸರ್ವಥಾ–ಪ್ರಯತ್ನೇನ–ನ ಕದಾಚನ–

ನಿತ್ಯಂ-ಸರ್ವದಾ ಇತ್ಯಾದಿಪದಗಳನ್ನು ಬಳಸಲಾಗಿರುತ್ತದೆ. ಮೇಲ್ಕಂಡಂತಹ ಪದಗಳು ಇದ್ದಲ್ಲಿ ಪಕ್ಷವನ್ನು ಅನುಸರಿಸಲೇಬೇಕು. ಕೇವಲ ನಿಯಮಗಳನ್ನು ಹೇಳಿದ ವಾಕ್ಯಗಳಿಗಿಂತಲೂ ಏವಕಾರಾದಿಗಳಿಂದ ಕೂಡಿದ ವಾಕ್ಯ ಪ್ರಬಲ. ಆದ್ದರಿಂದ ಅದನ್ನು ಅನುಸರಿಸಬೇಕು. ಪ್ರಕೃತ-

**ಜನ್ಮಾಷ್ಟಮೀ ರೋಹಿಣೀ ಚ ಶಿವರಾತ್ರಿಸ್ತಥೈವ ಚ ।**
**ಪೂರ್ವವಿದ್ಧೈವ ಕರ್ತವ್ಯಾ ತಿಥ್ಯಂತೇ ಪಾರಣಂ ಭವೇತ್ ॥**

ವಾಕ್ಯದಲ್ಲಿ ಅಷ್ಟಮಿಯಂದು ಸಾಮಾನ್ಯವಾಗಿ ಹೇಳದೆ ಜನ್ಮಾಷ್ಟಮೀ ಎಂದು ಹೇಳುವ ಮೂಲಕ ಶ್ರೀಕೃಷ್ಣ ಜನ್ಮಾಷ್ಟಮಿಯನ್ನೇ ಉಲ್ಲೇಖಿಸಿ **ಪೂರ್ವವಿದ್ಧೈವ ಕರ್ತವ್ಯಾ** ಎಂದು ಏವಕಾರದೊಂದಿಗೆ ಹೇಳಿರುವುದರಿಂದ ಇದು ನಿರವಕಾಶ ಪ್ರಮಾಣವೆನಿಸುತ್ತದೆ. ಹಾಗು ನೀವು ಹೇಳುವ -

**ತಥಾಷ್ಟಮೀಂ ಪೂರ್ವವಿದ್ಧಾಂ ಸಋಕ್ಷಾಂ ಚ ವಿವರ್ಜಯೇತ್** ಇತ್ಯಾದಿ ವಾಕ್ಯಗಳು ಅಷ್ಟಮೀ ಎಂದಷ್ಟೇ ಹೇಳಿದೆ. ಅದು ಜನ್ಮಾಷ್ಟಮಿಯನ್ನು ಬಿಟ್ಟು ಬೇರೆ ಅಷ್ಟಮಿವ್ರತವನ್ನು ಹೇಳುತ್ತಿರಬಹುದು. ಹಾಗಾಗಿ ವಿದ್ಧವಾದದ್ದನ್ನು 'ಬಿಡಬೇಕು' ಎಂದಷ್ಟೇ ಹೇಳುತ್ತಿದೆ. 'ಬಿಡಲೇಬೇಕು' ಇತ್ಯಾದಿಯಾಗಿ ಏವ ಕಾರಗಳನ್ನು ಸೇರಿಸಿಲ್ಲವಾದ್ದರಿಂದ ಸಾವಕಾಶಪ್ರಮಾಣವಾಗುತ್ತದೆ. ಇವುಗಳನ್ನು '**ಪೂರ್ವ-ವಿದ್ಧೈವ ಕರ್ತವ್ಯಾ**' ಪ್ರಮಾಣಗಳು ಬಾಧಿಸುತ್ತವೆ.

**ಉತ್ತರ:-** ಹೌದು ಶಾಸ್ತ್ರಗಳಲ್ಲಿ ಏವಕಾರಾದಿಗಳಿಂದ ಕೂಡಿದ ವಾಕ್ಯಗಳನ್ನು ನಿರವಕಾಶತ್ವೇನ ಪ್ರಮಾಣ ಎಂದು ಪರಿಗಣಿಸುವ ಪರಿಪಾಠವಿದೆ. ಪ್ರಕೃತ ಶ್ರೀಕೃಷ್ಣಜನ್ಮಾಷ್ಟಮಿಗೂ ವಿದ್ಧವಾದದ್ದನ್ನು ಬಿಡಬೇಕೆಂಬ ವಿಷಯದಲ್ಲಿ ಏವಕಾರಾದಿಗಳಿಂದ ಕೂಡಿದ ನಿರವಕಾಶ ಪ್ರಮಾಣಗಳಿವೆ.

**ಜನ್ಮಾಷ್ಟಮೀ ಪೂರ್ವವಿದ್ಧಾ ನ ಕರ್ತವ್ಯಾ ಕದಾಚನ ।**
**ಸಋಕ್ಷಾಪಿ ನ ಕರ್ತವ್ಯಾ ಸಪ್ತಮೀಸಂಯುತಾಷ್ಟಮೀ ।**
**ತಸ್ಮಾತ್ ಸರ್ವಪ್ರಯತ್ನೇನ ತ್ಯಾಜ್ಯಮೇವಾಶುಭಂ ಬುಧೈಃ ।**
**ವೇಧೇ ಪುಣ್ಯಕ್ಷಯಂ ಯಾತಿ ತಮಃ ಸೂರ್ಯೋದಯೇ ಯಥಾ ॥**
**ವರ್ಜನೀಯಾ ಪ್ರಯತ್ನೇನ ಸಪ್ತಮೀ ಸಂಯುತಾಷ್ಟಮೀ ॥** (ಪಾದ್ಮೇ)

ಪೂರ್ವವಿದ್ಧವಾದದಂದು ಜನ್ಮಾಷ್ಟಮಿಯನ್ನು ಎಂದಿಗೂ ಆಚರಿಸಬಾರದು. ಈ ವಾಕ್ಯದಲ್ಲಿ **ನ ಕದಾಚನ** ಎಂದೂ ಬಳಸಲಾಗಿದೆ. **ಜನ್ಮಾಷ್ಟಮೀ** ಎಂದು ಉಲ್ಲೇಖಿಸಲಾಗಿದೆ. ರೋಹಿಣಿನಕ್ಷತ್ರದಿಂದ ಕೂಡಿದ್ದರೂ ಸಪ್ತಮಿಸಹಿತವಾದ ಅಷ್ಟಮಿಯನ್ನು ಆಚರಿಸಬಾರದು, ಹಾಗಾಗಿ ಸರ್ವಪ್ರಯತ್ನದಿಂದ ಬುದ್ಧಿವಂತರು ಬಿಡಲೇಬೇಕು. ಏಕೆಂದರೆ ವೇಧದೋಷವಿದ್ದರೆ ಪುಣ್ಯವು ನಾಶವಾಗುತ್ತದೆ. ಸೂರ್ಯೋದಯವಾದಾಗ ಕತ್ತಲೆ ನಾಶವಾದಂತೆ. ಈ ವಾಕ್ಯದಲ್ಲಿ **ಸರ್ವಪ್ರಯತ್ನೇನ** ಎಂದೂ **ತ್ಯಾಜ್ಯಮೇವ** ಎಂದೂ ಹೇಳಲಾಗಿದೆ.

ಸರ್ವಪ್ರಯತ್ನದಿಂದಲೂ ಸಪ್ತಮಿ ಸಹಿತವಾದ ಅಷ್ಟಮಿಯನ್ನು ಬಿಡಬೇಕು ಈ ರೀತಿಯಾಗಿ ಮೇಲ್ಕಂಡ ಎಲ್ಲಾ ವಾಕ್ಯಗಳಲ್ಲಿ ಸಪ್ತಮೀವೇಧವನ್ನು ಬಿಡಬೇಕೆಂಬ ಅವಧಾರಣೆ ತೋರುತ್ತದೆ. ಕೃಷ್ಣಾಷ್ಟಮಿಯ ಪ್ರಸಂಗದಲ್ಲೇ ಹೇಳಿದ ಈ ವಾಕ್ಯಗಳು ನಿರವಕಾಶಪ್ರಮಾಣ ಎಂದೂ ತೋರುತ್ತವೆ.

ಏವಕಾರಾದಿಗಳಂತೆ **ವೈಷ್ಣವೈಃ** ಇತ್ಯಾದಿಗಳಿಂದ ಕೂಡಿದ ವಾಕ್ಯಗಳು ವೈಷ್ಣವರಿಗೆ ನಿರವಕಾಶಪ್ರಮಾಣವೆನಿಸುವವು. ನಾವು ಉಲ್ಲೇಖಿಸುವ ಶ್ಲೋಕಗಳಲ್ಲಿ **ವೈಷ್ಣವೈಃ** ಇತ್ಯಾದಿಗಳಿರುವುದರಿಂದ ವೈಷ್ಣವರಿಗೆ ಇದೇ ನಿರವಕಾಶಪ್ರಮಾಣವಾಗುವುದಿಲ್ಲವೇ.



## ಅವೈಷ್ಣವರಿಗೊಲಿದ ಮುಕ್ತಾಫಲ

**ಸ್ಮೃತಿಮಾಕ್ತಾಫಲ**ವೆಂಬ ಗ್ರಂಥದಲ್ಲಿ ಅಷ್ಟಮೀನಿರ್ಣಯದ ಸಂದರ್ಭದಲ್ಲಿ ಸಪ್ತಮೀವೇಧವಿದ್ದರೂ ಅಷ್ಟಮೀವ್ರತವನ್ನು ಆಚರಿಸಬೇಕೆಂದು ನಿರ್ಣಯಿಸಿ ನಂತರ ನವಮೀನಿರ್ಣಯದ ಸಂದರ್ಭದಲ್ಲಿ 'ವಿದ್ಧನವಮಿಯಂದು ರಾಮನವಮೀವ್ರತವನ್ನು ಆಚರಿಸಬಾರದು' ಎಂಬ ವಾಕ್ಯಗಳಿದ್ದರೂ ಅದು ವೈಷ್ಣವರಿಗಷ್ಟೇ ಅನ್ವಯಿಸುತ್ತದೆ. ನವಮೀ ಮತ್ತು ಅಷ್ಟಮೀವಿದ್ಧವಾಗಿದ್ದರೆ ವೈಷ್ಣವರು ವ್ರತಾಚರಣೆ ಮಾಡಬಾರದು. ವೈಷ್ಣವೇತರರೆಲ್ಲರೂ ವಿದ್ಧವಾದ ದಿನದಂದೇ ವ್ರತವನ್ನಾಚರಿಸಬೇಕು ಎಂದು ನಿರ್ಣಯಿಸಿದ್ದಾರೆ.

**ನವಮೀ ಚಾಷ್ಟಮೀ ವಿದ್ಧಾ ತ್ಯಾಜ್ಯಾ ವಿಷ್ಣುಪರಾಯಣೈಃ ।**
**ತದನ್ಯೇಷಾಂ ತು ಸರ್ವೇಷಾಂ ವ್ರತಂ ತತ್ರೈವ ನಿಶ್ಚಿತಮ್ ॥**

ವೈಷ್ಣವರು ಅಷ್ಟಮೀವಿದ್ಧವಾದ ನವಮಿಯನ್ನು ಆಚರಿಸಬಾರದು, ಉಳಿದವರೆಲ್ಲಾ ಅಂದೇ ಆಚರಿಸಬೇಕು.

ಕೃಷ್ಣಾಷ್ಟಮಿಗೂ ಇದೇ ನಿಯಮದಂತೆ 'ವೈಷ್ಣವರು ವಿದ್ಧವಾದುದನ್ನು ಬಿಡುವುದು. ವೈಷ್ಣವೇತರರು ವಿದ್ಧವಾದರೂ ಆಚರಿಸುವುದು' ಎಂದು ನಿರ್ಣಯಮಾಡಲು ಬರುತ್ತಿರಬೇಕಾದರೆ ಕೃಷ್ಣಾಷ್ಟಮಿಗೊಂದು ನಿರ್ಣಯ ರಾಮನವಮಿಗೊಂದು ನಿರ್ಣಯ ವಿಚಿತ್ರವೆನಿಸುತ್ತದೆ. ರಾಮನವಮೀ-ವ್ರತದಲ್ಲಿ ವೈಷ್ಣವ-ಅವೈಷ್ಣವಭೇದೇನ ವ್ಯವಸ್ಥೆ. ಕೃಷ್ಣಾಷ್ಟಮಿಗೆ ಮಾತ್ರ ಈ ವ್ಯವಸ್ಥೆ ಏಕೆ ಅನ್ವಯಿಸುವುದಿಲ್ಲ ಎಂಬ ಪ್ರಶ್ನೆ ಹಾಗೇ ಉಳಿಯುತ್ತದೆ.



## ವೇಧಕ್ಕಂಟದ ರಾಮ

ರಾಮನವಮಿಯ ವಿಚಾರದಲ್ಲಿಯು ಹೀಗೆ ಗೊಂದಲಗಳಿವೆ, ರಾಮ ಹುಟ್ಟಿದ ಕಾಲ ಕರ್ಕಾಟಕ ಲಗ್ನ –

**ಝಷಂ ಪೂಷಣಿ ಸಂಪ್ರಾಪ್ತೇ ಲಗ್ನೇ ಕರ್ಕಟಕಾಹ್ವಯೇ ।**
**ಆವಿರಾಸೀತ್ ಸ್ವಕಲಯಾ ಕೌಸಲ್ಯಾಯಾ ಪರಃ ಪುಮಾನ್ ॥**

ಮೀನದಲ್ಲಿ ರವಿ ಇರುವಾಗ ಕರ್ಕಾಟಕಲಗ್ನದಲ್ಲಿ ಪರಮಪುರುಷನು ತನ್ನ ಕಲೆಯಿಂದ ಕೌಸಲ್ಯೆಯಲ್ಲಿ ಅವತರಿಸಿದ.

ಆದ್ದರಿಂದ ಕರ್ಕಾಟಕಲಗ್ನ ಕಾಲದಲ್ಲಿ ಅರ್ಘ್ಯ ಕೊಡುವುದಿದೆ. ಆಗ ನವಮೀತಿಥಿ ಇರಬೇಕೋ ಅಥವಾ ಸೂರ್ಯೋದಯಕ್ಕೆ ಇದ್ದರೆ ಸಾಕೋ?

**ಚೈತ್ರಶುದ್ಧಾ ತು ನವಮೀ ಪುನರ್ವಸುಯುತಾ ಯದಿ ।**
**ಸೈವ ಮಧ್ಯಾಹ್ನಯೋಗೇನ ಮಹಾಪುಣ್ಯತಮಾ ಭವೇತ್ ॥**

ಚೈತ್ರ-ಶುಕ್ಲ-ನವಮೀ-ಪುನರ್ವಸುವಿನೊಂದಿಗೆ ಕೂಡಿದ್ದರೆ, ಮಧ್ಯಾಹ್ನವೂ ಇರುವ ಆ ತಿಥಿಯು ಮಹಾಪುಣ್ಯತಮವೆನಿಸುವುದು.

ಈ ಶ್ಲೋಕ ಮಧ್ಯಾಹ್ನ ನವಮೀ ಇರುವುದು ಮುಖ್ಯವೆನ್ನುತ್ತದೆ. ಇದಕ್ಕೆ ವಿರುದ್ದವಾಗಿ ಮತ್ತೊಂದು ವಾಕ್ಯ ಹೇಳುತ್ತದೆ ಉದಯಕ್ಕೆ ನವಮಿ ಇರಬೇಕೆಂದು-

**ಉದಯೇ ಚಾಷ್ಟಮೀಯುಕ್ತಾಂ ನವಮೀಂ ಪರಿವರ್ಜಯೇತ್ ।**
**ಉದಯೇ ನವಮೀ ಗ್ರಾಹ್ಯಾ ತತ್ರ ಶ್ರೀರಾಮಮರ್ಚಯೇತ್ ॥**

ಸೂರ್ಯೋದಯಕ್ಕೆ ಅಷ್ಟಮೀ ಇದ್ದು ನಂತರ ಇರುವ ನವಮಿಯನ್ನು ಬಿಡಬೇಕು. ಉದಯಕ್ಕೆ ನವಮಿ ಇರುವ ದಿನದಂದೇ ಶ್ರೀರಾಮನನ್ನು ಪೂಜಿಸಬೇಕು.

ಹೀಗೆ ಎರಡು ವಾಕ್ಯಗಳಲ್ಲಿ ಮಧ್ಯಾಹ್ನಕ್ಕೆ ಪ್ರಾಶಸ್ತ್ಯವನ್ನು ಒಂದು ವಾಕ್ಯ ನೀಡಿದರೆ, ಸೂರ್ಯೋದಕ್ಕೆ ತಿಥಿ ಇರಬೇಕೆಂದು ಮತ್ತೊಂದು ವಾಕ್ಯ ಒತ್ತಿಹೇಳುತ್ತದೆ. ಬಹಳ ಮುಖ್ಯವಾಗಿ ಅಷ್ಟಮೀವಿದ್ಧವಾದ ನವಮಿಯನ್ನು ಕೈಬಿಡಬೇಕೆಂದು ತಿಳಿಸುತ್ತದೆ.

ಸ್ಮೃತಿಮುಕ್ತಾವಳೀಕಾರರು ಇವುಗಳಲ್ಲಿ ಎರಡನೆಯ ವಾಕ್ಯಕ್ಕೆ ಬೆಲೆಕೊಟ್ಟು ಅಷ್ಟಮೀಯುಕ್ತವಾದ ನವಮಿ ಪೂಜೆ ಸಲ್ಲಿಸುವುದಲ್ಲ ದಶಮೀಯುಕ್ತವಾದ ವೇಧದೋಷವಿಲ್ಲದ ನವಮಿಯಂದು ಪೂಜಿಸಬೇಕು ಎಂಬ ಪಕ್ಷಕ್ಕೆ ನಿಲ್ಲುತ್ತಾರೆ.

ಕೃಷ್ಣಾಷ್ಟಮಿಯನ್ನು ವೇಧದೋಷವಿರುವ ದಿನದಂದು ಮಾಡಬಾರದೆಂಬ ವಾಕ್ಯಗಳಿವೆ, ರಾಮನವಮಿಯನ್ನೂ ವೇಧದೋಷವಿರುವಾಗ ಮಾಡಬಾರದು ಎಂಬ ವಾಕ್ಯಗಳಿವೆ, ಆದರೆ ರಾಮನವಮಿಯ ವಿಷಯದಲ್ಲಿ ಮಾತ್ರ ಆ ವಾಕ್ಯಗಳಿಗೆ ಬೆಲೆಕೊಟ್ಟು 'ವೇಧದೋಷದಂದು ವ್ರತಾಚರಣೆ ಮಾಡ-ಬಾರದು' ಎಂದು ನಿರ್ಣಯಿಸಿ, ಕೃಷ್ಣಾಷ್ಟಮಿಯ ವಿಷಯದಲ್ಲಾಗುವಾಗ ವೇಧದೋಷವಿರುವಾಗ ವ್ರತವನ್ನಾಚರಿಸಬಹುದು ಎಂದು ನಿರ್ಣಯಿಸುವುದು ಹೇಗೆ ಸರಿಯಾದೀತು?



## ವೇಧ ಬಿಟ್ಟವ ವೈಷ್ಣವ

ರಾಮನವಮೀವ್ರತನಿರ್ಣಯ ಪ್ರಸಂಗದಲ್ಲಿ ಕೃಷ್ಣಾಚಾರ್ಯರು ಮತ್ತೊಂದು ಶ್ಲೋಕವನ್ನು ಉದಾಹರಿಸುತ್ತಾರೆ–

**ಅಷ್ಟಮೀ ನವಮೀ ಚೈವ ದ್ವಾದಶೀ ಚ ಚತುರ್ದಶೀ ।**
**ಉದಯವ್ಯಾಪಿನೀ ಗ್ರಾಹ್ಯಾ ವೇಧಸ್ತ್ಯಾಜ್ಯೋ ಹಿ ವೈಷ್ಣವೈಃ ॥**

(ದತ್ತಾತ್ರೇಯಸಂಹಿತಾ)

ಅಷ್ಟಮೀ, ನವಮಿ, ಏಕಾದಶಿ, (ಸ್ಮೃತಿಗಳಲ್ಲಿ ಏಕಾದಶಿಯನ್ನು ದ್ವಾದಶೀವ್ರತವೆಂದು ಉಲ್ಲೇಖಿಸುತ್ತಾರೆ) ಚತುರ್ದಶಿ (ನರಸಿಂಹ ಜಯಂತಿ) ತಿಥಿಗಳು ಸೂರ್ಯೋದಯಕ್ಕೆ ಇರುವಂದೇ ವ್ರತವನ್ನಾಚರಿಸಬೇಕು. ಏಕೆಂದರೆ ವೇಧ ದೋಷವಿರುವ ತಿಥಿಯನ್ನು ವೈಷ್ಣವನು ಕೈಬಿಡಬೇಕಲ್ಲವೇ. (ವೇಧದೋಷವಿರುವ ತಿಥಿಯನ್ನು ಕೈಬಿಡುವುದು ವೈಷ್ಣವನ ಲಕ್ಷಣ.)

ಈ ಶ್ಲೋಕದಲ್ಲಿ 'ವೈಷ್ಣವರು' ಎಂದು ಉಲ್ಲೇಖಿಸುವ ಮೂಲಕ ವೈಷ್ಣವರು ಆಚರಿಸುವ ನಾಲ್ಕು ವ್ರತಗಳ ದಿನಗಳನ್ನೇ ಉದಾಹರಿಸಿದ್ದಾರೆ ಎಂಬುದು ಸ್ಪಷ್ಟ. ಅವುಗಳೆಂದರೆ ಅಷ್ಟಮೀ=ಕೃಷ್ಣಾಷ್ಟಮೀ, ನವಮೀ=ರಾಮನವಮೀ, ಏಕಾದಶಿ, ಚತುರ್ದಶಿ = ನರಸಿಂಹಜಯಂತಿ ಈ ವ್ರತಗಳನ್ನು ಸೂರ್ಯೋದಯಕ್ಕೆ ತಿಥಿ ಇರುವಂದೆ ಆಚರಿಸಬೇಕು. ಹಿಂದಿನ ತಿಥಿಯ ವೇಧವಿರುವಂದು ಆಚರಿಸಬಾರದು ಎಂದು ಸ್ಪಷ್ಟವಾಗಿ ಉಲ್ಲೇಖಿಸಿದ್ದರೂ ಇದನ್ನುಸ್ವತಃ ಕೃಷ್ಣಾಚಾರ್ಯರೇ ಉದಾಹರಿಸಿದ್ದರೂ ಕೃಷ್ಣಾಷ್ಟಮೀನಿರ್ಣಯಕ್ಕೆ ಇದನ್ನು ಅನ್ವಯಿಸಿಕೊಳ್ಳದಿರುವುದು ಆಶ್ಚರ್ಯವೆನಿಸುತ್ತದೆ !



## ಸ್ಮೃತಿಗಳಲ್ಲಿ ವೈಷ್ಣವರ ವಿಸ್ಮರಣೆ ?

ಸ್ಮೃತಿಮುಕ್ತಾವಳಿಯಲ್ಲಿ ವೇಧ ಸಾಮಾನ್ಯನಿರ್ಣಯವನ್ನು ಪ್ರಾರಂಭಿಸುವ ಮೊದಲೆರಡು ಶ್ಲೋಕಗಳು ಹೀಗಿವೆ–

**ಜನ್ಮಾಷ್ಟಮೀ ರೋಹಿಣೀ ಚ ಶಿವರಾತ್ರಿಸ್ತಥೈವ ಚ ।**
**ಪೂರ್ವವಿದ್ಧೈವ ಕರ್ತವ್ಯಾ ತಿಥ್ಯಂತೇ ಪಾರಣಂ ಭವೇತ್ ।।**

(ಬ್ರಹ್ಮಾಂಡಪುರಾಣ)

ಜನ್ಮಾಷ್ಟಮೀ, ರೋಹಿಣೀ ಮತ್ತು ಶಿವರಾತ್ರಿಗಳನ್ನು ಪೂರ್ವವಿದ್ಧವಾದ ತಿಥಿಯಂದೇ ಮಾಡಬೇಕು.ತಿಥ್ಯಂತದಲ್ಲಿ ಪಾರಣೆ !

**ಜನ್ಮಾಷ್ಟಮೀ ಜಯಂತೀ ಚ ಶಿವರಾತ್ರಿಶ್ಚತುರ್ದಶೀ ।**
**ಏತಾಃ ಪೂರ್ವಯುತಾಃ ಗ್ರಾಹ್ಯಾ ತಿಥ್ಯಂತೇ ಪಾರಣಂ ಭವೇತ್ ।।**

ಜನ್ಮಾಷ್ಟಮೀ, ಜಯಂತೀ ಮತ್ತು ಶಿವರಾತ್ರಿ ಹಾಗೂ ಚತುರ್ದಶಿಗಳನ್ನು ಪೂರ್ವತಿಥಿಯುಕ್ತವಾದಂದೆ ಆಚರಿಸಬೇಕು. ತಿಥ್ಯಂತದಲ್ಲಿ ಪಾರಣೆ.

ಈ ಎರಡು ವಾಕ್ಯಗಳಲ್ಲಿ ಶಿವರಾತ್ರಿಯನ್ನು ಉಲ್ಲೇಖಿಸುವ ಮೂಲಕ 'ಶಿವರಾತ್ರಿಯನ್ನಾಚರಿಸುವ ವೈಷ್ಣವೇತರರಿಗೆ ನಿಯಮವನ್ನು ಹೇಳಲಾಗಿದೆ' ಎಂಬ ಸೂಚನೆಯು ಎದ್ದು ತೋರುತ್ತದೆ. ಹೀಗೆ ಅವೈಷ್ಣವರಿಗೆ ಹೇಳಿದ ನಿಯಮದ ಆಧಾರದಲ್ಲಿ, ವೈಷ್ಣವರೂ ವಿದ್ಧಾಷ್ಟಮಿಯನ್ನಾಚರಿಸಬೇಕೆಂದು ವಿಧಿಸುವುದು ವಿಮರ್ಶಾರ್ಹವಿಷಯವೆನಿಸುತ್ತದೆ.

ಇನ್ನು ಪದ್ಮಪುರಾಣದ ವಾಕ್ಯ–

**ತಸ್ಮಾತ್ ಕೃಷ್ಣಾಷ್ಟಮೀ ಪೂಜ್ಯಾ ಸಪ್ತಮ್ಯಾಂ ನೃಪನಂದನ ।**
**ರೋಹಿಣೀಸಹಿತೋಪೋಷ್ಯಾ ಸರ್ವಪಾಪಪ್ರಣಾಶಿನೀ ॥**

ಸಪ್ತಮೀವಿದ್ಧವಾದ ರೋಹಿಣೀಸಹಿತವಾದ ಅಷ್ಟಮಿಯಂದು ಉಪವಾಸ ಮಾಡಬೇಕು ಎಂಬ ಈ ಶ್ಲೋಕವು ಕೆಲವು ಪಾಠದಲ್ಲಿ ಇಲ್ಲ, ಇದಕ್ಕೆ ವಿರುದ್ಧವಾಗಿ ಮುಂದಿನ ಶ್ಲೋಕದಲ್ಲೇ ಹೇಳಿರುವುದರಿಂದಲೂ ಪ್ರಕ್ಷಿಪ್ತಗಿರುವ ಸಾಧ್ಯತೆ ಇದೆ.

ಪ್ರಕ್ಷಿಪ್ತವಲ್ಲ ಎಂದು ಭಾವಿಸಿದರೂ, ಹಿಂದಿನ ಶ್ಲೋಕಗಳಲ್ಲಿ ಸಪ್ತಮೀವಿದ್ಧವಾದ ಅಷ್ಟಮಿಯಂದು ವ್ರತಾಚರಣೆ ಮಾಡಬಾರದೆಂದು ಹೇಳಿದ್ದಾರಾದ್ದರಿಂದ ಒಂದು ಪಕ್ಷ ಸಪ್ತಮೀಸಹಿತವಾದ ಅಷ್ಟಮಿಮಾತ್ರ ಇದೆ. ಅಂದೇ ರೋಹಿಣಿಯೂ ಇದೆ ಮಾರನೇ ದಿವಸ ಅಷ್ಟಮಿಯೇ ಇಲ್ಲವಾದರೆ ಅಥವಾ ರೋಹಿಣಿಯೋಗವಿಲ್ಲದೆ ಅಷ್ಟಮಿಯಷ್ಟು ಇದೆಯಾದರೆ, ಅಂತಹ ಸಂದರ್ಭದಲ್ಲಿ ಸಪ್ತಮೀವಿದ್ಧವಾಗಿದ್ದರೂ ರೋಹಿಣೀಯುತವಾದ ಅಷ್ಟಮಿ ಯನ್ನು ಮಾಡಬಹುದೆಂದು ಅರ್ಥೈಸಬಹುದಾಗಿ ದೆ. ಏಕೆಂದರೆ

**ರೋಹಿಣೀಸಹಿತಾಂ ಹಿತ್ವಾ ಯೋಽನ್ಯಸ್ಯಾಮಾಚರೇತ್ ಕ್ವಚಿತ್ ।**
**ಸ ಸರ್ವೈಃ ಸುಕೃತೈರ್ಹೀನಸ್ತಿರ್ಯಗ್ಯೋನಿಷು ಜಾಯತೇ ॥**

ರೋಹಿಣೀಸಹಿತವಾದಂದು ಬಿಟ್ಟು ಬೇರೆಯ ದಿನವ್ರತವನ್ನಾಚರಿಸಿದರೆ ಎಲ್ಲ ಪುಣ್ಯಗಳನ್ನು ಕಳೆದು ಕೊಂಡು ಹೀನಯೋನಿಗಳಲ್ಲಿ ಹುಟ್ಟುತ್ತಾನೆ ಎಂಬ ವಾಕ್ಯವಿದೆಯಾದ್ದರಿಂದ

ಅಗ್ನಿಪುರಾಣದ ವಾಕ್ಯ-

**ತಸ್ಮಾತ್ ಕೃಷ್ಣಾಷ್ಟಮೀ ಪೂಜ್ಯಾ ಸಪ್ತಮ್ಯಾಂ ನೃಪನಂದನ ।**
**ರೋಹಿಣೀಸಹಿತೋಪೋಷ್ಯಾ ಸರ್ವಪಾಪಪ್ರಣಾಶಿನೀ ॥**

ರಾಜನೇ ! ಆದ್ದರಿಂದ ಸಪ್ತಮಿ ಕೃಷ್ಣಾಷ್ಟಮಿವ್ರತಕ್ಕೆ ಉತ್ತಮವೆನಿಸಿದೆ , ರೋಹಿಣಿಸಹಿತವಾದ ಅಂದು ಉಪವಾಸ ಮಾಡುವುದು ಎಲ್ಲಾ ಪಾಪಗಳನ್ನು ನಾಶಪಡಿಸುತ್ತದೆ. ಎಂಬ ವಾಕ್ಯವು ಸೂರ್ಯೋದಯಕ್ಕೆ ಸಪ್ತಮೀ ಇರುವಂದು ವ್ರತವನ್ನು ಆಚರಿಸಲು ಹೇಳುತ್ತದೆಯಾದರೂ ಇದನ್ನು ಉಲ್ಲೇಖಿಸಿ **ಹರಿಭಕ್ತಿ ವಿಲಾಸ** ಎಂಬ ಗ್ರಂಥವು ವಿವರಿಸುತ್ತದೆ-

**ಯಚ್ಚ ವಹ್ನಿಪುರಾಣಾದೌ ಪ್ರೋಕ್ತಂ ವಿದ್ಧಾಷ್ಟಮೀವ್ರತಮ್ ।**
**ಅವೈಷ್ಣವಪರಂ ತಚ್ಚ ಕೃತಂ ತದ್ದೇವಮಾಯಯಾ ॥**

ವಹ್ನಿಪುರಾಣಾದಿಗಳಲ್ಲಿ ಏನು ವಿದ್ಧಾಷ್ಟಮೀವ್ರತವನ್ನು ಹೇಳಲಾಗಿದೆಯೋ ಅದು ಅವೈಷ್ಣವರನ್ನು ಕುರಿತು ಹೇಳಲಾಗಿದೆ. ಇದೆಲ್ಲ ದೇವಮಾಯೆಯಿಂದ ಮಾಡಲಾಗಿದೆ. (ಯೋಗ್ಯರಲ್ಲದ ಕೆಲವರನ್ನು ದಾರಿತಪ್ಪಿಸುವುದಕ್ಕಾಗಿಯೇ ವಿದ್ಧಾಷ್ಟಮೀವ್ರತವನ್ನು ಹೇಳಲಾಗಿದೆ)

ಈ ರೀತಿಯಾಗಿ ವಿದ್ಧಾಷ್ಟಮಿಯನ್ನು ಹೇಳುವ ವಾಕ್ಯಗಳನ್ನೇಲ್ಲಾ ವೈಷ್ಣವೇತರರ ಪರವೆಂದು ಹೇಳಲು ಬರುವಾಗ, 'ಸಪ್ತಮೀವೇಧದಂದು ವ್ರತಾಚರಣೆ ಸಲ್ಲ' ಎಂಬ ವಾಕ್ಯಗಳಿಗೆ ಕೃಷ್ಣಾಚಾರ್ಯರು ತಮ್ಮ ಗ್ರಂಥದಲ್ಲಿ ಗತಿಕಲ್ಪನೆ ಮಾಡಿದ್ದರೂ ಈ ರೀತಿ ಗತಿಕಲ್ಪನೆ ಸೂಕ್ತವೇ ? ಎಂಬ ಸಂಶಯ ಹಾಗೆ ಉಳಿಯುತ್ತದೆ.

**ಪ್ರಶ್ನೆ- ಕಾರ್ಯಾ ವಿದ್ಧಾಽಪಿ ಸಪ್ತಮ್ಯಾ ರೋಹಿಣೀಸಹಿತಾಷ್ಟಮೀ ।**

ಸಪ್ತಮೀವಿದ್ಧವಾಗಿದ್ದರೂ ರೋಹಿಣೀಸಹಿತವಾದ ಅಷ್ಟಮಿಯಂದು ವ್ರತವನ್ನಾಚರಿಸಬೇಕು ಎಂಬ ವಾಕ್ಯವನ್ನು ಛಲಾರಿ ನರಸಿಂಹಾಚಾರ್ಯರು ತಮ್ಮ ಸ್ಮೃತ್ಯರ್ಥಸಾಗರದಲ್ಲಿ ಉಲ್ಲೇಖಿಸುತ್ತಾರೆ. ಈ ವಾಕ್ಯದಂತೆ ಸಪ್ತಮೀ-ವೇಧವಿರುವ ಅಷ್ಟಮಿಯಂದು ವ್ರತವನ್ನು ಆಚರಿಸಲು ಅವಕಾಶವಿದೆ ಅಲ್ಲವೇ?

**ಉತ್ತರ - ವಿದ್ಧಾ ಕಾರ್ಯಾ** (ವಿದ್ಧವಾದರೂ ಮಾಡಬೇಕು)ಎಂಬ ವಾಕ್ಯದಿಂದ ಗೊತ್ತಾಗುವುದೇನೆಂದರೆ ವಿದ್ಧವಾದರೆ ಮಾಡಬಾರದು ಎಂಬುದು

ಸಾಮಾನ್ಯನಿಯಮ, ಅಷ್ಟಮಿಗೆ ರೋಹಿಣೀಯೋಗವಿರುವುದಾದರೆ ಅದು ವಿಶೇಷಪ್ರಸಂಗವಾದ್ದರಿಂದ ಸಪ್ತಮೀವೇಧವಿದ್ದರೂ ಅಂದು ಕೃಷ್ಣಾಷ್ಟಮಿಯನ್ನು ಆಚರಿಸಬಹುದು ಎಂದು.

ಈ ರೀತಿ ಅರ್ಥಮಾಡಲು ಪೂರ್ವವಿದ್ಧವಾದ ದಿನದಂದು ವೈಷ್ಣವರು ವ್ರತವನ್ನಾಚರಿಸಬಾರದೆಂಬ ಹಲವಾರು ವಾಕ್ಯಗಳ ವಿರೋಧ ಬರುತ್ತದೆ ಮತ್ತು **ಅವಿದ್ಧಾಯಾಂ ತು ಸರ್ಕ್ಷಾಯಾಂ ಜಾತೋ ದೇವಕಿನಂದನಃ ।** (ವಿದ್ಧವಲ್ಲದ ನಕ್ಷತ್ರದಿಂದ ಕೂಡಿದ ಅಷ್ಟಮಿಯಂದು ಕೃಷ್ಣ ಅವತರಿಸಿದ) ವಿದ್ಧವಲ್ಲದ ತಿಥಿಯಂದು ಕೃಷ್ಣ ಅವತರಿಸಿದನೆಂಬುದಾಗಿ ಸ್ಪಷ್ಟವಾಗಿ ಹೇಳುತ್ತಿರುವಾಗ ವಿದ್ಧವಾದರೂ ವ್ರತವನ್ನಾಚರಿಸಬಹುದು ಎಂದು ಹೇಗೆ ಅರ್ಥೈಸುವುದು?

ವಿದ್ಧವಾದರೂ ಆಚರಿಸಬೇಕೆಂಬ ವಾಕ್ಯವೂ ಸ್ಮೃತಿವಾಕ್ಯವಾದ್ದವರಿಂದ ಅದಕ್ಕೆ ಹೀಗೆ ಗತಿಕಲ್ಪನೆ ಮಾಡಬೇಕಾಗುತ್ತದೆ-

★ ಈ ವಾಕ್ಯವು ಅವೈಷ್ಣವರನ್ನು ಕುರಿತು ಹೇಳಿದ್ದಾಗಿದೆ.

★ ವಿದ್ಧವಲ್ಲದ ರೋಹಿಣೀಸಹಿತವಾದ ಅಷ್ಟಮಿಯ ದೊರೆಯುವುದಿಲ್ಲ ಎಂದಾದಲ್ಲಿ ಆ ವರ್ಷ ವ್ರತವನ್ನು ಬಿಡುವುದಲ್ಲ ಹೊರತಾಗಿ ಸಪ್ತಮೀ-ವಿದ್ಧವಾದರೂ ಅಷ್ಟಮೀಸಹಿತವಾದ ರೋಹಿಣಿಯಂದು ವ್ರತವನ್ನಾಚರಿಸಿ ಎಂದು ತಿಳಿಸುತ್ತಿದೆ.

## ಸರಿದುಹೋಯಿತೇ ಪ್ರಾಚೀನಸಂಪ್ರದಾಯ ?

**ಪ್ರಶ್ನೆ:**-ವೈಷ್ಣವ-ಅವೈಷ್ಣವ ಪರವಾದ ವಾಕ್ಯಗಳು ಎಂದು ಅರ್ಥೈಸಲು ಅವಕಾಶವಿದೆಯಾದರೂ, ಪ್ರಾಚೀನಸಂಪ್ರದಾಯವನ್ನು ಬಿಡುವುದಾದರೂ ಹೇಗೆ? ಕೃಷ್ಣಾಚಾರ್ಯರೇ ಮೊದಲಾದ ಸ್ಮೃತಿಸಂಗ್ರಹಕಾರರು ವಿಚಾರಮಾಡಿ ಅನುಸರಿಸಿಕೊಂಡು ಬಂದಿರುವ ಅನೂಚಾನವಾದ ಸಂಪ್ರದಾಯವನ್ನು ಬಿಡುವುದು ಸರಿಯೇ? ಸಂಪ್ರದಾಯವೂ ಒಂದು ಪ್ರಮಾಣವೇ ಅಲ್ಲವೇ !

**ಉತ್ತರ:**-ಸ್ಮೃತಿಸಂಗ್ರಹಕಾರರು ಅಂದಿನ ಕಾಲಕ್ಕೆ ಲಭ್ಯವಾದ, ಅವರ ಪ್ರದೇಶಗಳಲ್ಲಿ ಲಭ್ಯವಾದ ಪರಿಮಿತವಾದ ಗ್ರಂಥಗಳನ್ನು ಅನುಸರಿಸಿ, ಅಂದಿಗೆ ಪ್ರಚಲಿತವಿರುವ ಸಂಪ್ರದಾಯಗಳನ್ನು ಗಮನದಲ್ಲಿರಿಸಿಕೊಂಡು ಒಂದು

ನಿರ್ಣಯಕ್ಕೆ ಬಂದಿರುತ್ತಾರೆ. ಇಂದಿನ ಕಾಲದಂತೆ ದೇಶದ ಉದ್ದಗಲಕ್ಕೂ ಇರಬಹುದಾದ ಗ್ರಂಥಗಳ ಅವಲೋಕನದ ಅವಕಾಶ ಅವರಿಗೆ ಕಡಿಮೆ ಇರುತ್ತದೆಯಾದ್ದರಿಂದ ಸೀಮಿತ ಗ್ರಂಥಗಳನ್ನು ಆಧರಿಸಿ ನಿರ್ಣಯಕ್ಕೆ ಬಂದಿರುವ ಸಾಧ್ಯತೆ ಇದೆ.

ಇನ್ನು ಹದಿನಾರನೇ ಶತಮಾನದ ಮಧ್ಯಕಾಲದಲ್ಲಿದ್ದು ಸ್ಮೃತಿಸಂಗ್ರಹ ಮಾಡಿರುವ ಅನಂತದೇವಭಟ್ಟ ತನ್ನ ಸ್ಮೃತಿಕೌಸ್ತುಭದಲ್ಲಿ ವ್ರತಸ್ವರೂಪವನ್ನು ನಿರ್ಣಯಿಸುವಾಗ ಉಪವಾಸ ಮತ್ತು ಸಂಕಲ್ಪವೇ ಪ್ರಧಾನವೆಂಬುದು ಪ್ರಾಚೀನರ ಮತ, ಪೂಜಾದಿಗಳು ಪ್ರಧಾನವೆಂಬುದು ನವೀನರ ಮತ ಎಂದು ಉಲ್ಲೇಖಿಸಿದ್ದಾನೆ- **'ಉಪವಾಸ ಏವ ಪ್ರಧಾನಮ್.......ಇತಿ ಪ್ರಾಂಚಃ । ನವ್ಯಾಸ್ತು...........ಪೂಜಾಯಾಃ ಉಪವಾಸಸ್ಯ ಉಭಯೋರಪಿ ಪ್ರಾಧಾನ್ಯ-ಮಿತ್ಯಾಹುಃ'** ಇದರಿಂದ ಪ್ರಾಚೀನರ ಸಂಪ್ರದಾಯದಂತೆ ಉಪವಾಸ ಮತ್ತು ಪ್ರಾತಃ ಸಂಕಲ್ಪವೇ ಪ್ರಧಾನವೆಂದು ತೋರುತ್ತದೆ. ಹಾಗಿದ್ದರೆ ಸಂಕಲ್ಪಿಸುವಾಗ-ಉಪವಾಸ ಮಾಡುವಾಗ ಅಷ್ಟಮಿ ಇರಬೇಕೆಂಬುದು ಪ್ರಾಚೀನ ಸಂಪ್ರದಾಯವಾಗಿತ್ತು ಎಂದು ಊಹಿಸಬಹುದಾದರೆ ಅತ್ಯಂತ ಪ್ರಾಚೀನ ಸಂಪ್ರದಾಯದ ವಿರೋಧವು ಇರಲಾರದು.



## ವೈಷ್ಣವರಿಗೆ ಅನಂತದೇವನ ಕೌಸ್ತುಭ

೧೬ನೇ ಶತಮಾನದ ಅನಂತದೇವಭಟ್ಟನ ಗ್ರಂಥವನ್ನು ಅವಲೋಕಿಸಿದರೆ ಅವತ್ತಿನ ಕಾಲದಲ್ಲಿ ವೈಷ್ಣವರು ವಿದ್ಧಾಷ್ಟಮಿಯಂದು ವ್ರತಾಚರಣೆಯನ್ನು ನಿಷೇಧಿಸಿದ್ದರು, ಅವಿದ್ಧವಾದ ಅಷ್ಟಮಿ ಅಥವಾ ನವಮೀಸಹಿತವಾದ ಅಷ್ಟಮಿಯಂದು ವ್ರತವನ್ನಾಚರಿಸುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಇದರಿಂದ ವೈಷ್ಣವರ ಪ್ರಾಚೀನಸಂಪ್ರದಾಯ 'ಅವಿದ್ಧವಾದ ಅಷ್ಟಮೀವ್ರತಾಚರಣೆಯೇ ಆಗಿತ್ತು' ಎಂಬುದು ತಿಳಿಯುತ್ತದೆಯಾದ್ದರಿಂದ ಅನುವಾದದ ಜೊತೆಗೆ ಆ ಗ್ರಂಥದ ಕೆಲವು ವಾಕ್ಯಗಳನ್ನು ಯಥಾವತ್ತಾಗಿ ಉಲ್ಲೇಖಿಸಲಾಗಿದೆ.

**ಪೂರ್ವದಿನೇ ಸಪ್ತಮೀವೇಧೇ ತು ನಿಶೀಥವ್ಯಾಪಿನ್ಯಾ ಅಪಿ ಗ್ರಾಹ್ಯತ್ವಾಪವಾದಃ ವೈಷ್ಣವವಿಷಯಃ । ಯಥೋಕ್ತಂ ಜ್ಯೋತಿರ್ನಿಬಂಧೇ ಪಾದ್ಮೇ-**

**ಸರ್ವಥಾ ಸಪ್ತಮೀಯುಕ್ತಾ ಸಂತ್ಯಾಜ್ಯಾ ಸರ್ವವೈಷ್ಣವೈಃ ।**
**ಉಪೋಷ್ಯಾ ನವಮೀಯುಕ್ತಾ ತದುಕ್ತಂ ಪುಷ್ಕರೇ ಸ್ಫುಟಮ್ ॥**

**ವರ್ಜನೀಯಾ ಪ್ರಯತ್ನೇನ ಸಪ್ತಮೀ ಸಂಯುತಾಷ್ಟಮೀ ।**
**ಸ ಋಕ್ಷಾಽಪಿ ನ ಕರ್ತವ್ಯಾ ಸಶಲ್ಯಾ ಸಾ ಪ್ರಕೀರ್ತಿತಾ ॥**

**ಉಕ್ತಶ್ಚೈಷೋಪವಾದೋ ವೈಷ್ಣವನಿಬಂಧನಕರ್ತೃಭಿಃ ನೃಸಿಂಹಪರಿಚರ್ಯಾ-ಕರ್ತೃಪ್ರಭೃತಿಭಿಃ । ಅನುಸೃತಶ್ಚ ಸಕಲದೇಶಸ್ಥವೈಷ್ಣವಧುರೀಣೈಃ ।**

**ಅನುವಾದ–** ಹಿಂದಿನ ದಿನ ಸಪ್ತಮಿ ವೇಧವಿದ್ದರೂ ರಾತ್ರಿವ್ಯಾಪಿನಿಯಾಗಿದ್ದರೆ ಅಷ್ಟಮಿಯನ್ನು ಸ್ವೀಕರಿಸಬೇಕೆಂಬುದಕ್ಕೆ ಅಪವಾದ ಹೇಳುವ ವಾಕ್ಯಗಳೆಲ್ಲ (ಸಪ್ತಮೀವೇಧವನ್ನು ನಿಷೇಧಿಸುವ ವಾಕ್ಯಗಳು) ವೈಷ್ಣವರಿಗೆ ಸಂಬಂಧಿಸಿದುದು **ಜ್ಯೋತಿರ್ನಿಬಂಧ** ಎಂಬ ಗ್ರಂಥದಲ್ಲಿ ಪದ್ಮಪುರಾಣದ ವಾಕ್ಯವೆಂದು ಹೇಳಲಾದ ವಾಕ್ಯಗಳು ಹೀಗಿವೆ–

ಎಲ್ಲ ವೈಷ್ಣವರು ಸಪ್ತಮೀಸಹಿತವಾದ ಅಷ್ಟಮಿಯನ್ನು ಸರ್ವಥಾ ಬಿಡಬೇಕು. ನವಮೀಸಹಿತವಾದ ದಿನದಂದು ಉಪವಾಸವನ್ನುಆಚರಿಸಬೇಕು. ಎಂದು ಪುಷ್ಕರಖಂಡದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಸಪ್ತಮಿಸಹಿತ ಅಷ್ಟಮಿ ನಕ್ಷತ್ರದಿಂದ ಕೂಡಿದ್ದರೂ ಪ್ರಯತ್ನಪೂರ್ವಕವಾಗಿ ಬಿಡಬೇಕು. ಏಕೆಂದರೆ ಸಪ್ತಮೀಸಹಿತಾಷ್ಟಮಿಯು ಸಶಲ್ಯವೆನಿಸಿದೆ. ಈ ರೀತಿಯಾದ ಅಪವಾದವಾಕ್ಯಗಳನ್ನು ವೈಷ್ಣವಗ್ರಂಥಕರ್ತೃವಾದ ನರಸಿಂಹಪರಿಚರ್ಯಾಕಾರರೇ ಮೊದಲಾದವರು ಹೇಳಿದ್ದಾರೆ. ಸಕಲದೇಶಸ್ಥವೈಷ್ಣವಧುರೀಣರು ಇದನ್ನು ಅನುಸರಿಸಿದ್ದಾರೆ.

ಹೀಗೆ ಹೇಳುವ ಮೂಲಕ ಅಂದಿನ ಕಾಲದ ವೈಷ್ಣವರ ಸಂಪ್ರದಾಯ ಅವಿದ್ಧಾಷ್ಟಮಿ ಆಚರಣೆಯೇ ಆಗಿತ್ತು ಎಂದು ಉಲ್ಲೇಖಿಸಿದ್ದಾರೆ.

ಇಷ್ಟೇ ಅಲ್ಲದೆ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ – **ಏವಂ ಸತಿ ಗೌರೀವ್ರತತೃತೀಯಾಯಾಂ ದ್ವಿತೀಯಾವೇಧನಿಂದಾರ್ಥವಾದಸಹಿತಾಚಾರ-ಬಲೇನೌದಯಿಕೀ ಸ್ವಲ್ಪಾಽಪಿ ತೃತೀಯಾ ಗ್ರಾಹ್ಯೇತಿ ಸ್ವೀಕುರ್ವದ್ಭಿಃ ಜನ್ಮಾಷ್ಟಮ್ಯಾಂ ವೈಷ್ಣವಾಚಾರನಿಂದಾಪ್ರವೃತ್ತ್ಯೈಃ ವೈಷ್ಣವಧರ್ಮದ್ವೇಷ ಏವ ಸ್ವಗತಃ ಪ್ರಕಟೀ- ಕ್ರಿಯತ ಇತ್ಯಲಂ ವಿಸ್ತರೇಣ ।** ಇಂತಹ ''ವೈಷ್ಣವಾಚಾರನಿಂದೆಯಲ್ಲಿ ಪ್ರವೃತ್ತರಾದವರು ತಮ್ಮಲ್ಲಿರುವ ವೈಷ್ಣವಧರ್ಮದ್ವೇಷವನ್ನು ಹೊರಹಾಕಿದ್ದಾರೆ'' ಎಂದು ಉಲ್ಲೇಖಿಸುವ

ಮೂಲಕ ಇಂತಹ ಸಂಪ್ರದಾಯಕ್ಕೆ ದಾರಿ ತಪ್ಪಿಸುವ ಪ್ರಯತ್ನವನ್ನು ಕೆಲವು ಕುಹಕಿಗಳು ಮಾಡುತ್ತಿದ್ದಾರೆ, ಅಕಾರಣವಾಗಿ ಈ ಸಂಪ್ರದಾಯವನ್ನು ಟೀಕಿಸುತ್ತಿದ್ದಾರೆ ಎಂದು ಉಲ್ಲೇಖಿಸಿದ್ದಾರೆ. ಇದನ್ನೆಲ್ಲ ನೋಡಿದಾಗ ಅಂತಹ ವೈಷ್ಣವದ್ವೇಷಿಗಳ ಪಿತೂರಿಗೆ ಬಲಿಯಾಯಿತೆ ಈ ವೈಷ್ಣವ ಸಂಪ್ರದಾಯ? ಎಂಬ ಸಂಶಯವು ಗರಿಗೆದರಿ ನಿಲ್ಲುತ್ತದೆ.



## ಅರ್ಥಹೊಟ್ಟೆಗೆ - ಅರ್ಥಮೊಟ್ಟೆಗೆ

**ಜನ್ಮಾಷ್ಟಮೀ ಜಯಂತೀ ಚ ಶಿವರಾತ್ರಿಶ್ಚತುರ್ದಶೀ ।**
**ಏತಾಃ ಪೂರ್ವಯುತಾಃ ಕಾರ್ಯಾಸ್ತಿಥ್ಯಂತೇ ಪಾರಣಂ ಭವೇತ್ ॥**

ಈ ವಾಕ್ಯವನ್ನು ಸಪ್ತಮೀವೇಧವಿರುವಂದು ಕೃಷ್ಣಾಷ್ಟಮಿಯನ್ನು ಆಚರಿಸಬೇಕು ಎಂಬುದಕ್ಕೆ ಪ್ರಮಾಣವಾಗಿ ಹೇಳುವುದಕ್ಕೂ ಮೊದಲು ಚಿಂತಿಸಬೇಕಾದ ವಿಷಯಗಳಿವೆ. ಯಾವುದೇ ಪ್ರಮಾಣವಾಕ್ಯವನ್ನೂ ಪೂರ್ಣ ಪ್ರಮಾಣವಾಗಿ ಅನುಸರಿಸಬೇಕಾಗುತ್ತದೆ. ಆ ವಾಕ್ಯದ ಅರ್ಧವನ್ನು ಪ್ರಮಾಣವೆಂದು ಒಪ್ಪುವುದು, ಇನ್ನರ್ಧ ಕೈಬಿಡುವುದು ತರವಲ್ಲ. ಪ್ರಕೃತ ಇದೇ ಸಮಸ್ಯೆ ಇದೆ. ಈ ಶ್ಲೋಕದಲ್ಲಿ ಜನ್ಮಾಷ್ಟಮಿ,ಜಯಂತಿ, ಶಿವರಾತ್ರಿ, ಚತುರ್ದಶಿಗಳನ್ನು ಪೂರ್ವವಿದ್ಧವಾದದ್ದನ್ನೇ ಆಚರಿಸಬೇಕು ಎಂದು ವಿಧಿ ಮಾಡಲಾಗಿದೆ. ಇದನ್ನೇ ಅನುಸರಿಸಿಅಷ್ಟಮಿಯನ್ನು ಆಚರಿಸುವುದಾದರೆ ಶಿವರಾತ್ರಿಯನ್ನು ಆಚರಿಸಲೇಬೇಕಾಗುತ್ತದೆ. ಆದರೆ ಈ ವಾಕ್ಯವನ್ನು ಉಲ್ಲೇಖಿಸುವ ಕೃಷ್ಣಾಚಾರ್ಯರೇನಮುಂದೆ ಶಿವರಾತ್ರಿವ್ರತವನ್ನು ಉಲ್ಲೇಖಿಸುವಾಗ **ತದ್ ವ್ರತಂ ನ ಬ್ರಾಹ್ಮಣೈರನುಷ್ಠೇಯಮ್** ಎಂಬುದಾಗಿ ಈ ಶಿವರಾತ್ರಿವ್ರತವನ್ನು ಬ್ರಾಹ್ಮಣರು ಆಚರಿಸಬಾರದು ಎಂದು ತಾವೇ ನಿರ್ಣಯಿಸುತ್ತಾರೆ. ಹಾಗಾದರೆ ಈ ಪ್ರಮಾಣದಲ್ಲಿ ಹೇಳಿದ ಒಂದು ಭಾಗವನ್ನು ಬಿಟ್ಟು ಇನ್ನೊಂದು ಭಾಗವನ್ನಷ್ಟೇ ಹಿಡಿಯುವುದು ಸರಿಯಾದೀತೆ? ಅದರ ಹೊರತಾಗಿ ಸಂಪೂರ್ಣ ಈ ಪ್ರಮಾಣವೆಲ್ಲವು ವೈಷ್ಣವೇತರರನ್ನು ಕುರಿತದ್ದಾಗಿದೆ ಎಂದು ನಿರ್ಣಯಿಸುವುದೇ ಉಚಿತವಲ್ಲವೇ. ಇದಕ್ಕೆ ಅನುಸಾರಿಯಾಗಿ ಪೂರ್ವ–ವೇಧವನ್ನು ಹೇಳುವ ವಾಕ್ಯಗಳೆಲ್ಲ ವೈಷ್ಣವೇತರಪರ ಶುದ್ಧಾಷ್ಟಮಿಯನ್ನು ಅಥವಾ ನವಮೀಯೋಗಯನ್ನು ಹೇಳುವ ವಾಕ್ಯಗಳು ವೈಷ್ಣವಪರ ಎಂದು

ನಿರ್ಧರಿಸುವುದೇ ಉಚಿತವಲ್ಲವೇ ! ಇದಕ್ಕೆ ಪೂರಕವಾಗಿಯೇ **ವೈಷ್ಣವೈಃ** ಎಂದು ಸೂಚಿಸಲಾಗಿದೆಯಲ್ಲವೇ !

ಇನ್ನು ಈ ವಾಕ್ಯದಲ್ಲಿ **ತಿಥ್ಯಂತೇ ಪಾರಣಂ ಭವೇತ್** ಎಂದೂ ಉಲ್ಲೇಖಿಸ-ಲಾಗಿದೆ. ಈ ವಾಕ್ಯವನ್ನು ಪ್ರಮಾಣ ಎನ್ನುವವರು ತಿಥ್ಯಂತದಲ್ಲಿಯೇ ಪಾರಣೆ ಮಾಡಬೇಕಾಗುತ್ತದೆ, ನಕ್ಷತ್ರ ಮುಗಿದ ಮೇಲಾಗಲಿ ಮರುದಿನ ಬೆಳಿಗ್ಗೆಯಾಗಲಿ ಪಾರಣೆ ಮಾಡುವಂತಿಲ್ಲ ಅಥವಾ ಈ ವಾಕ್ಯವನ್ನು ಪ್ರಮಾಣದ ಪಟ್ಟಿಯಿಂದ ಕೈಬಿಡಬೇಕಾಗುತ್ತದೆ.

## ಚತುರ್ಮುಖನಿರ್ಣಯ

ಕೃಷ್ಣಾಚಾರ್ಯರೇ ಮೊದಲಾದ ಸಂಗ್ರಹಕಾರರು **ವರ್ಜನೀಯಾ ಪ್ರಯತ್ನೇನ ಸಪ್ತಮೀ ಸಂಯುತಾಷ್ಟಮೀ** ಎಂದು ಸಪ್ತಮೀವೇಧವನ್ನು ಬಿಡಬೇಕೆಂಬ ವಾಕ್ಯಗಳಿಗೆ ಗತಿಕಲ್ಪನೆ ಮಾಡುವ ಪ್ರಯತ್ನ ಮಾಡಿದ್ದಾರೆ. ಅದು ಹೇಗೆಂದರೆ ‘‘ಎರಡು ದಿನಗಳಲ್ಲಿ ನಿಶೀಥಕ್ಕೆ ಅಷ್ಟಮಿ ಇದ್ದರೆ ಆಗ ಎರಡನೇ ದಿನವನ್ನು (ಸಪ್ತಮೀವೇಧವಿಲ್ಲದ) ವ್ರತಾಚರಣೆಗೆ ಸ್ವೀಕರಿಸಬೇಕು’’ ಎಂದು ಈ ವಾಕ್ಯ ಹೇಳುತ್ತಿದೆ ಎಂಬುದಾಗಿ ಅಭಿಪ್ರಾಯ ಪಡುತ್ತಾರೆ. ಆದರೆ

★ ವಿದ್ಧವಾದುದನ್ನು ಆಚರಿಸಬಾರದೆಂದು ಏಕಾದಶಿಗೆ ನಿರ್ಣಯ ಕೊಡುವ ಮೂಲಕ ಆಚಾರ್ಯರು ನೀಡಿದ ಮಾರ್ಗದರ್ಶನ .

★ ವೈಷ್ಣವ - ಅವೈಷ್ಣವಭೇದೇನ ವ್ಯಾಸರೇ ವ್ರತಗಳನ್ನು ವಿಭಾಗ ಮಾಡಿರುವುದು.

★ ಆಚಾರ್ಯರೇ ದಿನಪೂರ್ತಿವ್ರತಾಚರಣೆಯನ್ನು ಹೇಳಿರುವುದು.

★ ವಿಷ್ಣುಪಂಚಕ, ರಾಮನವಮೀ ಇತ್ಯಾದಿ ವ್ರತಗಳಲ್ಲಿ ವಿದ್ಧತ್ಯಾಗದ ವೈಷ್ಣವಸಂಪ್ರದಾಯ. ಈ ಹಿನ್ನೆಲೆಯಲ್ಲಿ **ವಿದ್ಧೈವ ಕರ್ತವ್ಯಾ** ಎಂಬ ವಾಕ್ಯಗಳಿಗೆ ಗತಿಕಲ್ಪನೆ ಮಾಡಿ, **ಪೂರ್ವವಿದ್ಧಾ ನ ಕರ್ತವ್ಯಾ** ಎಂಬ ವಾಕ್ಯಗಳನ್ನು ಪ್ರಮಾಣವಾಗಿ ಸ್ವೀಕರಿಸುವುದು ಉಚಿತವಲ್ಲವೇ ?

**ಪ್ರಶ್ನೆ:-** ವಿರುದ್ಧವಾದ ಎರಡು ಪ್ರಮಾಣಗಳು ಇರುವಾಗ ಈ ರೀತಿಯಾಗಿ ಗತಿ ಕಲ್ಪನೆ ಮಾಡುವುದು ಯುಕ್ತಿ ಯುಕ್ತವಾಗಿದೆ. ಎರಡೂ ವಾಕ್ಯಗಳನ್ನು

ಪ್ರಮಾಣವೇನ್ನಬೇಕು ಅಥವಾ ಒಂದು ಪ್ರಮಾಣ ಇನ್ನೊಂದು ಅಪ್ರಮಾಣ ಎನ್ನಬೇಕು. ನೀವು ಒಂದು ಪ್ರಮಾಣ ಇನ್ನೊಂದು ಅಪ್ರಮಾಣ ಎಂಬ ದಾರಿಯನ್ನು ಹಿಡಿದಿದ್ದೀರಿ ನಾವು ಎರಡೂ ವಾಕ್ಯಗಳನ್ನು ಪ್ರಮಾಣವೆಂದು ಅನುಸರಿಸಿದ್ದೇವೆ. ಎರಡೂ ವಾಕ್ಯಗಳು ಪ್ರಮಾಣವಾಗಬೇಕಾದರೆ ಹೀಗೆ ಗತಿಕಲ್ಪನೆಯನ್ನು ಮಾಡಲೇಬೇಕು ಬಿಟ್ಟರೆ ಬೇರೆ ದಾರಿ ಇಲ್ಲ. ಎರಡೂ ವಾಕ್ಯಗಳಿಗೂ ಪ್ರಾಮಾಣ್ಯ ಹೇಳುವುದು ಗರಿಮೆಯಲ್ಲವೇ?



## ವ್ಯಾಸರ ಜಾಡು ಹಿಡಿದಾಗ

**ಉತ್ತರ:-**ವ್ಯಾಸರದ್ದೇ ಆದರೂ ಎಲ್ಲ ವಾಕ್ಯಗಳನ್ನು ವೈಷ್ಣವರು ಅನುಸರಿಸ-ಬೇಕಿಲ್ಲ. ಕೆಲವು ಮೋಹಕ್ಕೋಸ್ಕರ ಹೊರಟಿರುತ್ತವೆ. **ಭಾಷಾತ್ರಯ**ಗಳ ಬಳಿಕೆ ವ್ಯಾಸರ ಸ್ವಭಾವ, ನಾವು ಅದನ್ನರಿತು ವಾಕ್ಯಗಳಿಗೆ ಅರ್ಥವನ್ನು ಮಾಡಬೇಕಾಗುತ್ತದೆ ಎಂಬುದು ಆಚಾರ್ಯರ ಮತ. ಆದ್ದರಿಂದ ವಿರುದ್ಧವಾದ ಎರಡು ಸ್ಮೃತಿಗಳಲ್ಲಿ ಒಂದನ್ನು ಸಜ್ಜನಪ್ರವರ್ತಕವಾಗಿಯಐ ಇನ್ನೋಂದನ್ನು ಸಜ್ಜನೇತರಪ್ರವರ್ತಕವಾಗಿ ಯೂ ನಿರ್ಣಯಿಸಬಹುದಾಗಿದೆ.

ನಾವು ವಿದ್ಧಾಷ್ಟಮಿಯನ್ನು ಆಚರಿಸಬಾರದು. ನವಮೀಸಹಿತವಾದ ಅಷ್ಟಮಿಯನ್ನು ಆಚರಿಸಬೇಕು ಎಂದು ಹೇಳಿದ ವಾಕ್ಯಗಳಲ್ಲಿ **ವೈಷ್ಣವೈಃ** ಇತ್ಯಾದಿಗಳ ಉಲ್ಲೇಖವಿರುವುದು ವೈಷ್ಣವರು ಇದನ್ನು ಆಚರಿಸಬೇಕು ಎಂಬುದಾಗಿ ಒಂದು ವಾಕ್ಯವನ್ನು ಮಾತ್ರ ಅನುಷ್ಠೇಯ ಎಂದು ನಿರ್ಣಯಿಸುವುದು ಸೂತ್ರ-ಭಾಷ್ಯಕಾರರಿಗೆ ಸಮ್ಮತವೆನಿಸುವುದಲ್ಲವೇ?

ಸ್ಮೃತಿಮುಕ್ತಾವಳೀಕಾರರೇ ಉಲ್ಲೇಖಿಸುವ ವಾಕ್ಯ- **ಅವಿದ್ಧಾಯಾಂ ತು ಸರ್ಕ್ಷಾಯಾಂ ಜಾತೋ ದೇವಕಿನಂದನಃ ॥** ಸಪ್ತಮಿವೇಧವಿಲ್ಲದ ರೋಹಿಣೀ-ಯುತವಾದ ಅಷ್ಟಮಿಯಂದು ಕೃಷ್ಣ ಅವತರಿಸಿದ್ದಾನೆ. ಹಾಗಾದರೆ ವ್ರತಾಚರಣೆಯನ್ನು ವೇಧವಿಲ್ಲದ ರೋಹಿಣೀಯುತವಾದ ಅಷ್ಟಮಿಯೇ ಆಚರಿಸಬೇಕಲ್ಲವೇ? ಸಪ್ತಮಿವೇಧವಿಲ್ಲದ ಅಷ್ಟಮಿಗಳಲ್ಲಿ ಬಹುಶಃ ರೋಹಿಣಿಯೋಗ ಬಂದೇ ಬರುತ್ತದೆ. ಸೂರ್ಯೋದಯಕ್ಕಿರುವ ತಿಥಿಯೆ

ದಿನಪೂರ್ತಿಗೂ ಅನ್ವಯಿಸುತ್ತದೆಯಾದರೆ ಸರ್ವಥಾ ರೋಹಿಣೀಯೋಗ ಸಿದ್ಧಿಸುತ್ತದೆಯಾದ್ದರಿಂದ ವೇಧವಿಲ್ಲದ ರೋಹಿಣೀಯೋಗವಿರುವ ಅಷ್ಟಮಿ ವ್ರತಾಚರಣೆ ಮಾಡಿದಂತಾಗುತ್ತದೆ.



## ಆಚಾರ್ಯರ ಹೃದಯ ತೋರಿದ ವಿಷ್ಣುತೀರ್ಥರು

ಆಚಾರ್ಯರ ಸಹೋದರರಾದ ಶ್ರೀವಿಷ್ಣುತೀರ್ಥರು ತಮ್ಮ ಸನ್ಯಾಸ-ಪದ್ಧತಿಯನ್ನು ರಚಿಸುವಾಗ -

**ಶ್ರುತ್ವಾ ಗುರೋಃ ಸಮ್ಯಗೇವಾರ್ಥಮೇತಮ್,**
**ವಕ್ಷ್ಯಾಮ್ಯತಃ ಕರ್ಮಣಿ ನಾತ್ರ ಶಂಕಾ ॥** (ವಿಷ್ಣುತೀರ್ಥೀಯ-೧.೬)

ಆಚಾರ್ಯರಿಂದ ಈ ವಿಷಯಗಳನ್ನು ಚೆನ್ನಾಗಿ ತಿಳಿದು ಕೊಂಡು ಹೇಳುತ್ತಿದ್ದೇನೆ, ಆದ್ದರಿಂದ ಸಾಧಕರಿಗೆ ಗ್ರಂಥದ ವಿಷಯದಲ್ಲಿ ಶಂಕೆಗೆ ಅವಕಾಶವಿಲ್ಲ ಎಂದು ಮೊದಲಿಗೆ ಪ್ರತಿಜ್ಞೆಗೈದು ಮೂರನೇ ಅಧ್ಯಾಯದಲ್ಲಿ ಆತ್ಮಶುದ್ಧಿಗಾಗಿ ಯತಿಗಳು ಅಮಾವಾಸ್ಯೆ ಸಂಕ್ರಾಂತಿ ಇತ್ಯಾದಿಗಳಲ್ಲಿ ಉಪವಾಸ ಮಾಡಬಹುದೆಂದು ತಿಳಿಸುವ ಸಂದರ್ಭದಲ್ಲಿ -

**ತಿಥಯೋ ಪೂರ್ವವಿದ್ಧಾಸ್ತು ಸರ್ವಾ ವರ್ಜ್ಯಾ ಉಪೋಷಣೇ ।**

'ಪೂರ್ವತಿಥಿಯಿಂದ ವಿದ್ಧವಾದ ಎಲ್ಲಾ ತಿಥಿಗಳೂ ಉಪವಾಸಕ್ಕೆ ವರ್ಜ್ಯವೆನಿಸಿವೆ' ಎಂದು ಹೇಳುವ ಮೂಲಕ ವಿದ್ಧತಿಥಿಗಳಂದು ಯಾವುದೇ ಉಪವಾಸವನ್ನು ಮಾಡಬಾರದೆಂದು ಆಚಾರ್ಯರಿಗೆ ಸಮ್ಮತವಾದ ಸಾಮಾನ್ಯನಿಯಮವನ್ನು ಹಾಕಿಕೊಟ್ಟಿರುವಾಗ, ಈ ನಿಯಮವನ್ನು ವಿಷ್ಣುಪಂಚಕಾದಿಗಳಿಗೆ ಅನ್ವಯಿಸಿಕೊಳ್ಳುವ ಸಂಪ್ರದಾಯವಿದ್ದರೂ ಕೃಷ್ಣಾಷ್ಟಮಿಗೆ ಮಾತ್ರ ಅನ್ವಯಿಸದಿರುವುದು ಅಪಚಾರವಾಗಲಾರದೇ ?



## ವೇಧ ಬಗೆದ ನರಸಿಂಹ

ನರಸಿಂಹಜಯಂತಿಯನ್ನು ಪ್ರಸಂಗತಃ ನೋಡುವುದಾದರೆ ಸ್ಮೃತಿಕೌಸ್ತುಭ ಕಾರರು **ವೈಷ್ಣವ-ಅವೈಷ್ಣವ** ರೀತಿಯಿಂದಲೇ ವಿಭಾಗಿಸುತ್ತಾರೆ. ವೈಶಾಖ ಶುಕ್ಲ ಪಕ್ಷ ಸಾಯಂಕಾಲ ಚತುರ್ದಶೀತಿಥಿ ಇರುವ ದಿನ ನರಸಿಂಹಜಯಂತಿಯನ್ನು ಆಚರಿಸಬೇಕು ಎಂದು ಹೇಳಿ ಪುನಃ **ಯದ್ವಾ ವೈಷ್ಣವಾನ್ ಪ್ರತ್ಯಯಂ ನಿರ್ಣಯಃ** ಎಂದು ಪ್ರಾರಂಭಿಸಿ ಈ ಪ್ರಮಾಣವನ್ನು ಕೊಡುತ್ತಾರೆ –

**ಅನಂಗೇನ ಸಮಾಯುಕ್ತಾ ನೋಪೋಷ್ಯಾ ಸಾ ಚತುರ್ದಶೀ।**
**ಪೂರ್ಣಾ ಯುಕ್ತಾನ್ ತು ತಾಂ ಕುರ್ಯಾನ್ನರಸಿಂಹಸ್ಯ ತುಷ್ಟಯೇ ॥**

**ಯಃ ಕರೋತಿ ನರೋ ಮೋಹಾತ್ ಕಾಮವಿದ್ಧಾಂ ಚತುರ್ದಶೀಮ್।**
**ಧನಾಪತ್ತೈರ್ವಿಯುಜ್ಯೇತ ತಸ್ಮಾತ್ತಾಂ ಪರಿವರ್ಜಯೇತ್ ॥**

ತ್ರಯೋದಶಿಯಿಂದ ಕೂಡಿದ ಚತುರ್ದಶಿಯಂದು ಉಪವಾಸ ಮಾಡಬಾರದು. ಪೂರ್ಣಿಮೆಯಿಂದ ಕೂಡಿದ್ದನ್ನು ನರಸಿಂಹನ ತುಷ್ಟಿಗಾಗಿ ಆಚರಿಸಬೇಕು. ಯಾವುದೇ ಮನುಷ್ಯ ಮೋಹದಿಂದ ತ್ರಯೋದಶೀ ಸಹಿತವಾದ ಚತುರ್ದಶಿಯನ್ನು ಆಚರಿಸಿದರೆ ಅವನು ಸಂಪತ್ತು, ಸಂತಾನಗಳಿಂದ ದೂರಾಗುತ್ತಾನೆ. ಆದ್ದರಿಂದ ತ್ರಯೋದಶೀವಿದ್ಧವಾದ ಚತುರ್ದಶಿಯನ್ನು ಆಚರಿಸಬಾರದು.

ಈ ರೀತಿಯಾಗಿರುವ ಮೇಲಿನ ವಾಕ್ಯಗಳಿಂದ ತಿಳಿಯುವುದೇನೆಂದರೆ – ನರಸಿಂಹನು ಸಾಯಂಕಾಲದಲ್ಲಿ ಅವತರಿಸಿದ್ದರೂ, ಸಾಯಂಕಾಲಕ್ಕಷ್ಟೇ ಇರುವ ಅಂದರೇ ತ್ರಯೋದಶೀವಿದ್ಧವಾದ ತಿಥಿಯಂದು ನರಸಿಂಹಜಯಂತಿಯನ್ನು ಆಚರಿಸಬಾರದು. ಹೊರತಾಗಿ ಸೂರ್ಯೋದಯಕ್ಕೆ ಚತುರ್ದಶಿ ಇರುವಂದೇ ನರಸಿಂಹಜಯಂತಿಯನ್ನು ಆಚರಿಸುವುದು ವೈಷ್ಣವರಿಗೆ ಯುಕ್ತವಾದ ಕ್ರಮ ಎಂದು. ಈ ರೀತಿಯಾಗಿ ನರಸಿಂಹಜಯಂತಿಯನ್ನು ಸಾಯಂಕಾಲ ಚತುರ್ದಶೀ ಇರುವ ದಿನದಂದು ಅವೈಷ್ಣವರೂ ಸೂರ್ಯೋದಯಕ್ಕೆ ಚತುರ್ದಶೀ ಇರುವ ದಿನದಂದು ವೈಷ್ಣವರೂ ಆಚರಿಸುವುದು. ಏಕೆಂದರೆ ಕಾರಣ ಸ್ಪಷ್ಟವಾಗಿದೆ. ವಿದ್ಧತಿಥಿಗಳಂದು ವೈಷ್ಣವರು ವ್ರತಗಳನ್ನು ಆಚರಿಸುವುದಿಲ್ಲ, ಅವಿದ್ಧವಾದ ಅಂದರೆ ಸೂರ್ಯೋದಯಕ್ಕೆ ಇರುವ ತಿಥಿಯೇ ವೈಷ್ಣವರಿಗೆ ವಿಹಿತ. ಈ ರೀತಿ ನಿರ್ಣಯಿಸುವ ಈ ಗ್ರಂಥಕಾರರು ಕೃಷ್ಣಾಷ್ಟಮಿಗೆ ಮಾತ್ರ ವೈಷ್ಣವ ಅವೈಷ್ಣವ

ಕ್ರಮದಿಂದ ವಿಭಾಗ ಎಂಬ ನಿಯಮವನ್ನು ಅನ್ವಯಿಸದಿರುವುದು ಒಂದು ಕಣ್ಣಿಗೆ ಬೆಣ್ಣೆ ಇನ್ನೊಂದು ಕಣ್ಣಿಗೆ ಸುಣ್ಣ ಎಂಬ ನಿಯಮದಂತೆ ಆಗಲಿಲ್ಲವೇ?

**ಬೃಹನ್ನಾರಸಿಂಹ** ಎಂಬ ಗ್ರಂಥವು ಇದನ್ನೇ ಸ್ಪಷ್ಟವಾಗಿ ಹೇಳುತ್ತದೆ.

**ಕೇವಲಂ ಚ ಪ್ರಕರ್ತವ್ಯಂ ಮದ್ದಿನಂ ಫಲಕಾಂಕ್ಷಿಭಿಃ ।**
**ವೈಷ್ಣವೈರ್ನತು ಕರ್ತವ್ಯಾ ಸ್ಮರವಿದ್ಧಾ ಚತುರ್ದಶೀ ॥**

ಫಲವನ್ನಪೇಕ್ಷಿಸುವವರು ಶುದ್ಧವಾದ ಚತುರ್ದಶಿಯಂದು ನನ್ನ ವ್ರತವನ್ನು (ನರಸಿಂಹ ಜಯಂತಿ) ಆಚರಿಸಬೇಕು. ತ್ರಯೋದಶಿಸಹಿತವಾದ ಚತುರ್ದಶಿ-ಯಂದು ವೈಷ್ಣವರು ವ್ರತಾಚರಣೆ ಮಾಡಬಾರದು.

ಸ್ವಾತೀನಕ್ಷತ್ರ ಅಥವಾ ಮಂಗಳವಾರಗಳು ಚತುರ್ದಶಿಗೆ ಸೇರಿದರೆ ಬಹಳ ವಿಶೇಷ ಎಂದು ಹೇಳಿದ್ದರೂ ತ್ರಯೋದಶೀಸಹಿತವಾಗಿದ್ದರೆ ಸ್ವಾತಿ-ಮಂಗಳವಾರಗಳಿಂದ ಕೂಡಿದ್ದರೂ ಆ ದಿನದಂದು ವ್ರತಾಚರಣೆ ಸಲ್ಲ.

**ಕಾಮವಿದ್ಧಾ ನ ಕರ್ತವ್ಯಾ ಸ್ವಾತೀಭೌಮಯುತಾ ಯದಿ ।**

ನರಸಿಂಹಜಯಂತಿಯ ದಿನದಂದು ನರಸಿಂಹನಿಗೆ ಅರ್ಘ್ಯಾದಿಗಳನ್ನು ಕೊಡುವುದಿದೆ. ಅದನ್ನು ಸಾಯಂಕಾಲ ಹಿರಣ್ಯಕಶಿಪುವನ್ನು ಸಂಹರಿಸಿದ ಕಾಲಕ್ಕೆ ಕೊಡುವುದು ವಿಶೇಷ. ಆದರೆ ಸಾಯಂಕಾಲಕ್ಕೆ ಚತುರ್ದಶೀ ಇರುವುದಕ್ಕಿಂತಲೂ ಸೂರ್ಯೋದಯಕ್ಕೆ ಚತುರ್ದಶೀತಿಥಿ ಇರುವ ದಿನದಂದು ವೈಷ್ಣವರು ನರಸಿಂಹಜಯಂತಿಯನ್ನು ಆಚರಿಸುವುದು ಸೂಕ್ತ.

**ಇಂದಿಗೂ ಶ್ರೀಮಧ್ವಾಚಾರ್ಯರ ಸೋದರರಾದ ಶ್ರೀವಿಷ್ಣುತೀರ್ಥರಿಂದ ಸ್ಥಾಪಿತವಾದ ಶ್ರೀಸುಬ್ರಹ್ಮಣ್ಯಮಠದಲ್ಲಿ ಸೂರ್ಯೋದಯಕ್ಕೆ ಚತುರ್ದಶೀತಿಥಿ ಇರುವಂದು ನರಸಿಂಹಜಯಂತಿ ಆಚರಣೆಯ ಸಂಪ್ರದಾಯ ರೂಢಿಯಲ್ಲಿದೆ.**



## ವಿಷ್ಣುಪಂಚಕ

ವಿಷ್ಣುಪಂಚಕವ್ರತವನ್ನಂತೂ ಅವಿದ್ಧಗಳಲ್ಲೇ ಆಚರಿಸಬೇಕೆಂಬುದು ಸರ್ವ ಸಮ್ಮತವೇ ಆಗಿದೆ.

**ಉದಯವ್ಯಾಪಕೋ ದರ್ಶಃ ಪೌರ್ಣಮಾಸೀ ತು ಯಾಮಿಕಾ ।**
**ಮಧ್ಯಾಹ್ನವ್ಯಾಪಿನೀ ಶೋಣಾ ಉಪೋಷ್ಯಾ ವಿಷ್ಣುತತ್ಪರೈಃ ॥**

ವೈಷ್ಣವರು ಉದಯದಿಂದಲೂ ಇರುವ ಅಮಾವಾಸ್ಯೆಯಂದು, ಸೂರ್ಯೋದಯದಿಂದ ಒಂದು ಯಾಮ ಕಾಲವಾದರೂ ಇರುವ ಹುಣ್ಣಿಮೆ-ಯಂದು, ಸೂರ್ಯೋದಯದಿಂದ ಮಧ್ಯಾಹ್ನದವರೆಗೂ ಇರುವ ಶ್ರವಣನಕ್ಷತ್ರದಂದು ಉಪವಾಸ ಮಾಡಬೇಕು.

**ಪೂರ್ವವಿದ್ಧಾಂ ನ ಕರ್ತವ್ಯಂ ತತ್ರ ಚೈಕಾದಶೀವ್ರತಮ್ ।**
**ಚತುರ್ದಶೀವಿಮಿಶ್ರೇ ಯೇ ನೋಪೋಷ್ಯೇ ಪರ್ವಣೀ ಉಭೇ ।**
**ಉತ್ತರಾಷಾಢಮಿಶ್ರಂ ತು ನೋಪೋಷ್ಯಂ ಶ್ರವಣಂ ಬುಧೈಃ ॥**

ದಶಮೀವಿದ್ಧವಾದ ಏಕಾದಶೀವ್ರತವನ್ನು ಆಚರಿಸಬಾರದು, ಚತುರ್ದಶೀ ಮಿಶ್ರವಾದ ಹುಣ್ಣಿಮೆ ಅಮಾವಾಸ್ಯೆಗಳಂದು ಉಪವಾಸ ಮಾಡಬಾರದು, ಉತ್ತರಾಷಾಢನಕ್ಷತ್ರದಿಂದ ಕೂಡಿದ (ಪೂರ್ವವಿದ್ಧವಾದ) ಶ್ರವಣನಕ್ಷತ್ರದಂದು ಉಪವಾಸ ಮಾಡಬಾರದು.

ಹೀಗೆ ವೈಷ್ಣವವ್ರತವಾದ ವಿಷ್ಣುಪಂಚಕವನ್ನು ಪೂರ್ವವಿದ್ಧವಾದ ತಿಥಿಗಳಂದು ಆಚರಿಸಬಾರದು ಎಂಬುದನ್ನು ಅನುಸರಿಸಿಕೊಂಡು ಬಂದಿದ್ದೇವೆ. ಇದೇ ರೀತಿಯಾಗಿ ವಿಷ್ಣುಪ್ರೀತಿಕರವ್ರತವಾದ ಕೃಷ್ಣಾಷ್ಟಮಿಗೂ ಪೂರ್ವ- ವಿದ್ಧತಿಥಿಯಂದು ವೈಷ್ಣವರು ವ್ರತಾಚರಣೆ ಮಾಡಬಾರದು ಎಂದು ಸ್ಪಷ್ಟ ಆದೇಶಗಳಿರುವಾಗ ಒಂದು ಆದೇಶವನ್ನು ಶಿರಸಾ ವಹಿಸಿ ಪಾಲಿಸುವುದು ಇನ್ನೊಂದು ಆದೇಶವನ್ನು ಗಾಳಿಗೆ ತೂರುವುದು ಸರಿಯೇ?



## ದೃಷ್ಟಿಪೂತಂ ನ್ಯಸೇತ್ ಪಾದಮ್

ಸ್ಮಾರ್ತಸಂಪ್ರದಾಯವನ್ನು ಅನುಸರಿಸುವ ಸ್ಮೃತಿಸಂಗ್ರಹಕಾರರು ರಾಮನವಮಿ, ನರಸಿಂಹಜಯಂತಿ ಇತ್ಯಾದಿಗಳನ್ನು ನಿರ್ಣಯಿಸುವಾಗ ಸಾಮಾನ್ಯವಾಗಿ ಒಂದೇ ನಿಯಮವನ್ನು ಅನುಸರಿಸಿದ್ದಾರೆ. ಅದೆಂದರೆ 'ವ್ರತತಿಥಿಗೆ ಪೂರ್ವತಿಥಿಯ ವೇಧವಿದ್ದರೂ ವ್ರತದ ಮುಖ್ಯ ಕಾಲಕ್ಕೆ ಆಯಾ ತಿಥಿಗಳಿದ್ದರೆ ಸಾಕು' ಎಂಬುದು ವೈಷ್ಣವೇತರ ಕ್ರಮ ಹಾಗೂ 'ವ್ರತದ ಮುಖ್ಯಕಾಲ ಎಂಬುದನ್ನು ಪರಿಗಣಿಸದೆ ಸೂರ್ಯೋದಯಕ್ಕೆ ಆಯಾ ವ್ರತತಿಥಿಗಳು ಇರಬೇಕು. ವಿದ್ಧವಾದ ತಿಥಿಗಳು ವ್ರತಕ್ಕೆ ಅನರ್ಹವಾಗುತ್ತವೆ' ಎಂಬುದು ವೈಷ್ಣವಕ್ರಮ. ಉಳಿದೆಲ್ಲ ವ್ರತಗಳಲ್ಲಿಯು ಈ ನಿಯಮವನ್ನು ಅನುಸರಿಸಿ ಕೃಷ್ಣಾಷ್ಟಮಿಗೆ ಮಾತ್ರ ಈ ನಿಯಮವನ್ನು ಅನುಸರಿಸದೆ ಇರುವುದು ಅರ್ಥವಾಗದ ಸಂಗತಿಯಾಗಿದೆ. ಹಾಗೆಯೇ ಏಕಾದಶಿ, ವಿಷ್ಣುಪಂಚಕ, ರಾಮನವಮಿ ಇತ್ಯಾದಿಗಳೆಲ್ಲವನ್ನು ವೈಷ್ಣವರು ಅವಿದ್ಧತಿಥಿಗಳಂದೆ ಆಚರಿಸಬೇಕೆಂದು ನಿರ್ಣಯಿಸುವ ವೈಷ್ಣವರೂ ಸಪ್ತಮೀವಿದ್ಧವಾದ ಕೃಷ್ಣಾಷ್ಟಮಿಯನ್ನು ಆಚರಿಸುವುದು ತರವಾದೀತೆ?!



# ಗ್ರಂಥ ಋಣ

1. ಪದ್ಮಪುರಾಣ
2. ಪಂಚರಾತ್ರಸಂಹಿತಾ
3. ಜಯಂತೀಕಲ್ಪ
4. ಶ್ರೀಕೃಷ್ಣಾಮೃತಮಹಾರ್ಣವ
5. ಸಂನ್ಯಾಸಪದ್ಧತಿ
6. ಸ್ಮೃತಿಕೌಸುಭ
7. ಸ್ಮೃತಿಮುಕ್ತಾಫಲ
8. ಸ್ಮೃತಿಮುಕ್ತಾವಲೀ
9. ಹರಿಭಕ್ತಿವಿಲಾಸ
10. ಸ್ಮೃತ್ಯರ್ಥಸಾಗರ

★★★★★